# ಅಪರಂಜಿ

ಅಕ್ಟೋಬರ್
'89

ಜನ್ಮ ದಿನೋತ್ಸವ ಸಂಚಿಕೆ



ಆನಂದ್
ಶಿವರಾಮ ಕಾರಂತ
ಕಮಲಾ ರಾಮಸ್ವಾಮಿ
ಶೀನೂ
ಬೀರಣ್ಣ
ಲೀಲಾ ಮಿರ್ಲೆ
ಅ. ರಾ. ಸೇ
ಶಿವು
ಶಾಂತಾ ರಘು
ಆರ್. ಕೆ. ಲಕ್ಷ್ಮಣ್
ಎ. ಎಸ್. ಚಂದ್ರಪ್ರಭ

ಪ್ರತಿ : ಎರಡೂವರೆ ರೂಪಾಯಿ




(ತಿಳಿನಗೆಯ ಕಾರಂಜಿ)

**ಸಂಪುಟ ೭ ಅಕ್ಟೋಬರ್ ೧೯೮೯ ಸಂಚಿಕೆ ೧**

ಹರಿಕಥೆ ದಾಸರ ಮಗ ಪೋಲೀಸ್ ಇಲಾಖೆಯಲ್ಲಿ ಕೆಲಸಕ್ಕೆ ಅರ್ಜಿ ಗುಜರಾಯಿಸಿದ. ಮೂರು ಅಧಿಕಾರಿಗಳು ಭೇಟಿಗೆಂದು ಕರೆಸಿಕೊಂಡರು. ಕೇಳಿದರು·

"ನೀನೊಬ್ಬನೇ ಇಧೀ ಅಂತಿಟ್ಕೋ; ಸುತ್ತ ದೊಂಬಿ ಸೇರಿದೆ ಅಂತನ್ಕೋ; ಏನ್ಮಾಡ್ತಿ,? ನೀನು-ಆಗ" ಎಂದು.

''ಇದೇನು ಮಹಾ! ಕೈಲಿ ತಟ್ಟೆ ಹಿಡಕೊಂಡು ಒಂದು ಸುತ್ತು ಸುತ್ತಿವರೆ ಎಂಥಾ ದೊಂಬಿಯೇ ಇರಲಿ, ಎಷ್ಟೇ ಜನ ಸೇರಿರಲಿ, ಒಂದು ನಿಮಿಷದಲ್ಲಿ ಜನ ಎಲ್ಲಾ ಚದುರಿ ಮಾಯವಾಗಿ ಬಿಡ್ತಾರೆ ಲಾಗಾಯ್ತಿನ ಅನುಭವದಿಂದ ಹೇಳ್ತೀನಿ'' ಎಂದು ದಾಸರ ವಟು ಉತ್ತರಿಸಿದನಂತೆ.

—ಕೆಲಸ ಸಿಕ್ಕಿತಂತೆ,


| | | |
|---|---|---|
| ಗೌರವ ಸಲಹೆಗಾರರು :<br>ಶ್ರೀ ಅ. ರಾ. ಸೇ.<br>ಶ್ರೀ ಶೇಷಗಿರಿ<br>ಸಂಪಾದಕ :<br>**ಶಿವಕುಮಾರ್** | ಚಂದಾ ವಿವರ :<br>ಬಿಡಿ ಪ್ರತಿ :<br>2 ರೂ. 50 ಪೈ.<br>ವಾರ್ಷಿಕ ಚಂದಾ :<br>25 ರೂ.<br>ಆಜೀವ ಚಂದಾ :<br>250 ರೂ. | ವಿಳಾಸ :<br>ಅಪರಂಜಿ ಕಾರ್ಯಾಲಯ,<br>36, 6ನೆ ಮುಖ್ಯ ರಸ್ತೆಯ<br>ಮಲ್ಲೇಶ್ವರಂ, ಬೆಂಗಳೂರು-<br>560 003.<br>ಕೆಲಸದ ವೇಳೆ :<br>ಬೆಳಗ್ಗೆ 8ರಿಂದ 10ರವರೆಗೆ ಮಾತ್ರ |

## ಈ ಸಂಚಿಕೆಯಲ್ಲಿ —



ವ್ಯಂಗ್ಯ ಚಿತ್ರಗಳು —ಅಶ್ವತ್, ಬಾಗೂರು ಮಾರ್ಕಂಡೇಯ

ಮುದ್ರಣ : ಇಂಪ್ರೆಷನ್ಸ್ : ಬೆಂಗಳೂರು 560 003 : ದೂರವಾಣಿ : 342144

# ಓದುಗರಲ್ಲಿ ಮನವಿ

ಕಾಗದದ ಬೆಲೆ, ಮುದ್ರಣ ವೆಚ್ಚ ಗಗನಕ್ಕೇರಿದ್ದರೂ, ಅಪರಂಜಿಯ ಬೆಲೆಯನ್ನು ಆರು ವರ್ಷಗಳಿಂದ ಬದಲಿಸದೆ ಹಾಗೇ ಉಳಿಸಿಕೊಂಡು ಬಂದಿದ್ದೀರಲ್ಲಾ, ಇದರ ಮರ್ಮ ಏನು? ಅಂತ ಅನೇಕ ಹಿತೈಷಿಗಳು ನಮ್ಮನ್ನು ಕೇಳಿದ್ದಾರೆ. ಶ್ರೀ ಸಾಮಾನ್ಯನ ಕೈಗೆ ಅಪರಂಜಿ ಆದಷ್ಟು ಸುಲಭವಾಗಿ ದೊರಕಲಿ ಎಂಬ ಉದ್ದೇಶದಿಂದ ಇಷ್ಟು ದಿನ ಬೆಲೆ ಏರಿಸುವಿಕೆಯ ಬಗ್ಗೆ ನಿರ್ಧಾರವನ್ನು ಮುಂದೂಡಿದ್ದೆವು. ಈಗ ವೆಚ್ಚದ ಮಟ್ಟ ನಾವು ಭರಿಸಲಾಗದಷ್ಟು ಏರಿರುವುದರಿಂದ ವಿಧಿ ಇಲ್ಲದೇ, ಬಿಡಿ ಪ್ರತಿ ಹಾಗೂ ಚಂದಾ ದರಗಳನ್ನು ಪುನರ್ವಿಮರ್ಶಿಸಬೇಕಾಗಿದೆ, 1989ರ ಅಕ್ಟೋಬರ್ 1 ರಿಂದ ಅಪರಂಜಿ ದರಗಳನ್ನು ಈ ಮುಂದೆ ತಿಳಿಸಿರುವಂತೆ ನಿಗದಿಸಿದ್ದೇವೆ:

| | | |
|---|---|---|
| ಬಿಡಿ ಪ್ರತಿ | — | 2ರೂ. 50 ಪೈ |
| ವಾರ್ಷಿಕ ಚಂದಾ | — | 25 ರೂ. |
| ಆಜೀವ ಚಂದಾ | — | 250 ರೂ. |

ಹಾಲಿ ಚಂದಾದಾರರು, ಚಂದಾ ಅವಧಿ ಮುಗಿದ ಸೂಚನಾಪತ್ರ ಕೈ ಸೇರಿದಾಗ ಹೊಸ ಚಂದಾ ಕಳಿಸಿದರೆ ಸಾಕು. ಈಗಾಗಲೇ 150 ರೂ. ನೀಡಿ ಆಜೀವ ಸದಸ್ಯರಾಗಿರುವವರು, ಹೆಚ್ಚುವರಿ ಹಣ ಕಳುಹಿಸಬೇಕಾಗಿಲ್ಲ.

ಓದುಗರು ಇನ್ನು ಮುಂದೆಯೂ ತಮ್ಮ ಪ್ರೋತ್ಸಾಹವನ್ನು ನೀಡುತ್ತಾರೆಂಬ ನಂಬುಗೆ ಅಪರಂಜಿಗೆ,

**ಶಿವಕುಮಾರ್**
ಸಂಪಾದಕ

# ಅಪರಂಜಿ

**ತಿಳಿನಗೆಯ ಕಾರಂಜಿ**

ಸಂಪುಟ-೭ ಅಕ್ಟೋಬರ್-೮೯ ಸಂಚಿಕೆ-೧

ಅಲ್ಲಿ ಸೂರ್ಯನು ಬೆಳಗುವುದಿಲ್ಲ. ಚಂದ್ರತಾರೆಗಳು ಬೆಳಗುವುದಿಲ್ಲ. ಮಿಂಚು ಹೊಳೆಯುವುದಿಲ್ಲ, ಅಗ್ನಿ ಹೇಗೆ ಬೆಳಗೀತು ? —ಉಪನಿಷತ್

ಪರಬ್ರಹ್ಮದ ಬೆಳಕಿನಿಂದ ಸೂರ್ಯ ಚಂದ್ರ ತಾರೆಗಳು ಬೆಳಗುತ್ತಿವೆ. ಅದು ಪರಂಜ್ಯೋತಿ ಎಂದು ಉಪನಿಷತ್ತು ಹೇಳುತ್ತಿದೆ.

ಆಧುನಿಕ ಆಡಳಿತಗಳು ಕೊಟ್ಟ ಅಂಕಿ ಅಂಶಗಳು ಭರವಸೆಗಳು ಹೇಳಿಕೆಗಳು ಮಾತ್ರ ಬೆಳಕಿಗೆ ಬರುತ್ತವೆ ಅವು ಹೇಳದ, ಬೆಳಕಿಗೆ ತಾರದ ಅಂಕಿಗಳು ಕತ್ತಲಲ್ಲಿ ಕೊಳೆಯುತ್ತವೆ. ಅವನ್ನು ರಹಸ್ಯಗಳೆನ್ನುತ್ತಾರೆ.

ಈ ಆಡಳಿತಗಳು ಪ್ರಜೆಗಳನ್ನು ರಕ್ಷಿಸಲೆಂದೇ ಅಸ್ತಿತ್ವಕ್ಕೆ ಬಂದಿದ್ದರೂ. ಅವುಗಳಲ್ಲಿ ಭಕ್ಷಣೆ ಅಪಾರ ಪ್ರಮಾಣದಲ್ಲಿದೆ ಎಂದು ಎಲ್ಲರೂ ಬಲ್ಲರು.

ಪ್ರಜೆಗಳ ಸೇವೆಗಾಗಿಯೇ ಇರುವ ಆಡಳಿತ ಯಂತ್ರಗಳಲ್ಲಿ ರಹಸ್ಯಗಳು ಏಕಿರಬೇಕು ? ಪ್ರಜೆಗಳ ಕ್ಷೇಮಾಭ್ಯುದಯಗಳಿಗಾಗಿ ಶ್ರಮಿಸುತ್ತಿರುವವರು ಮುಚ್ಚಿಡುವಂಥದ್ದು ಏನು ?

ಅಂತಹ ರಹಸ್ಯಗಳು ಆಡಳಿತ ಯಂತ್ರಗಳನ್ನು ರಕ್ಷಿಸಲೆಂದೇ ರಹಸ್ಯಗಳಾಗಿ ಉಳಿದಿರಲು ಸಾಧ್ಯ.

ರಹಸ್ಯಗಳೆಂಬ ಕತ್ತಲೆಗಳನ್ನು ಸೃಷ್ಟಿಸುವ ಆಡಳಿತಗಳು ಕತ್ತಲೆಗಳ ಕತ್ತಲೆಗಳು; ಪರಾಂಧಕಾರಗಳು.



— ಆನಂದ್

---

ಭದ್ರಾವತಿ ಉಕ್ಕು ಕಾರ್ಖಾನೆ ಕೇಂದ್ರದ ವಶಕ್ಕೆ.

—ಸುದ್ದಿ

ಅದನ್ನೇ ವಿಜಯನಗರಕ್ಕೆ ಸಾಗಿಸುತ್ತಾರೆಂಬುದು ಸುಳ್ಳಂತೆ !

• • •

ಅನಿಲ ಸಿಲಿಂಡರ್‌ಗಳ ವಂಚನೆ: ಒಬ್ಬನ ಬಂಧನ.

—ಪತ್ರಿಕೆ

ಗಾಳಿಸುದ್ದಿಯಿಂದ ಹಿಡಿದಿರಬೇಕು !

• • •

ಬೋಫೋರ್ಸ್ ಜನತೆಯೇ ತೀರ್ಪು ನೀಡಲಿ.

— ಶ್ರೀ ಪೂಜಾರಿ

ಬೋಫೋರ್ಸ್ ತೀರ್ಪು ದೇವರೇ ಬಂದರೂ ಸಾಧ್ಯವಿಲ್ಲ !

• • •

ಬೇರೆ ಬೇರೆ ದೇಶಗಳಲ್ಲಿ ವಿ. ಪಿ. ಸಿಂಗ್ ಖಾತೆ.

— ಸುದ್ದಿ

ಇಟಲಿಯಲ್ಲಂತೂ ಇರಲಾರದು !

• • •

ಇಂದಿನ ಸೂರ್ಯ ಗ್ರಹಣ ಭಾರತದಲ್ಲಿ ಕಾಣುವುದಿಲ್ಲ.

— ಪತ್ರಿಕೆ

ಬಂದ್ ಪ್ರಯುಕ್ತ ಇರಬೇಕು !

•　　•　　•

ಕ್ರಿಕೆಟ್ ಹಗರಣ ನಿಮ್ಮ ನಿಮ್ಮಲ್ಲೇ ಬಗೆಹರಿಸಿಕೊಳ್ಳಿ
ಇಲ್ಲದಿದ್ದರೆ ಮಂಡಳಿಗೆ ಪ್ರತಿಕೂಲ.

— ಶ್ರೀ ವೆಂಕಟರಾಮಯ್ಯ

ಅರೆ, ಈಗಲೇ ತೀರ್ಪು ಕೊಟ್ಟಂತಾಯಿತಲ್ಲ !

•　　•　　•

ಶ್ರೀ ಪಾಟೀಲ್ ದೆಹಲಿಗೆ ; ಕಾಂಗ್ರೆಸ್ಸಿನಲ್ಲಿ ಊಹಾಪೋಹ.

— ಪತ್ರಿಕೆ

ಊಹೆಗಿಂತ ಪೋಹವೇ ಜಾಸ್ತಿ, ಏನೋ ?

•　　•　　•

ಎನ್ ಟಿ. ಆರ್. ನಟನೆ ವಿರುದ್ಧ ರಿಟ್ ವಜಾ.

— ಸುದ್ದಿ

ಇನ್ನವರು ಎಷ್ಟು ನಟನೆ ಬೇಕಾದರೂ ಮಾಡಬಹುದು !

•　　•　　•

ಬೀದರ್‌ನಲ್ಲಿ ರೈಲು ತಡೆ: ಹೆಚ್ಚಿನ ಸೌಲಭ್ಯಕ್ಕೆ ಒತ್ತಾಯ.

— ಸುದ್ದಿ

ತಡೆ ಹಾಕಿದಷ್ಟು ಸೌಲಭ್ಯ ಕಮ್ಮಿಯಾಗುತ್ತಲ್ಲ ?



# ಹೆಬ್ಭಾರತ ಗೀತೆ

—ಶಿವರಾಮ ಕಾರಂತ

---

ಜನಗಣ ನೊಣಗಳೆ-ಏಳಿ ಎದ್ದೇಳಿರಿ
ಜಯವಾಗುತಲಿದೆ ಅತಿ ನಾಯಕರಿಂಗೆ
ಕ್ಷಿತಿಯಲಿ ವಿಷ್ಣುವು ಹೆತ್ತವತಾರಗಳೆಲ್ಲವು ಸೋತಿರಲು
ಕಲ್ಕಿಯು ಬಂದು ಹಲ್ಕಿಯಾದಾಗಿ ನಾಚಿಕೆಗೆಟ್ಟಿರಲು
ಮತಿವಂತರ ಕಾಲವೆ ಸಂದಿದೆಯೆಂದು ಲೋಕವೆ
ಹಿಗ್ಗಿರಲು
ಕೃತಾಪರಾಧಿಗಳೆಲ್ಲರು ಪುನರಪಿ ಜನಿಸುತೆ
ಕೃತಾರ್ಥರೆನಿಸಿದ ಕಾಲವಿದು!

ಜಯವಾಗಲಿ ಜಯವಾಗಲಿ ಎಂಬುದೆ ಬೇಡ
ಜಯವಾಗದೆ ಹೋಗದು—ತಾನೆಂದೂ!

ನೀತಿಗಳೆಂಬುವು ನೇತಿಗಳಾಗೆ
ಏತರ ಚಿಂತೆಯು ಪ್ರಜೆಗಳಿಗೆ?
ಭಾರತ ದೇಶದ ಇಂದಿನ ಸಂತತಿ
ಹಿಂದಿನಂತಲ್ಲವು ನೋಡಿರಲ!

ಹಿಂದಕು ಮುಂದಕು ನೋಡದ ಜನರು
ತಂದೇತಂದರು— ಸ್ವಾತಂತ್ರ್ಯವನು,
ಕುತಂತ್ರ ಮೆರೆಸುವ—ಕಾಲವಿದು!

ಗಾಂಧಿ ಗೀಂಧಿ ಹೋದರು ಹಿಂದೆ
ಬ್ರಾಂದಿ ಗೀಂದಿ ನದಿಗಳ ತುಂಬ
ಮಂದಿ ಮಾರ್ಬಲ ಬೇಕಿಲ್ಲೆಂದೆ

ದೇಶದಿ ತುಂಬಿರೆ ಸ್ಪರ್ಧೆಯು, ನಿಂದೆ.
ಬುದ್ಧಿಗಿದ್ಧಿ ಇದ್ದರು—ಒಂದೇ
ಇಲ್ಲದೆ ಹೋದರೂ—ಭಯವೇನೆಂದೆ?
ಲಜ್ಜೆಭಂಡರಾ ಪಡೆಯಿದೆ ಮುಂದೆ
ಭಾರತ ದೇಶಕೆ—ಭಯವೇಸ್ ಎಂದೆ?

ಉಜ್ವಲ ಭವಿಷ್ಯ ಕಾದಿದೆ ಇನ್ನು,
ಗುಂಡೇ ಗುಂಡು—ಬೋಫೋರ್ಸ್ ಗನ್ನು !

ಪರಿಸು ಧ್ವನಿಯನು, ಮುಟ್ಟಲಿ ತಾರಕ
ಹಬ್ಬಲಿ ಎಲ್ಲೂ—ಗುಲ್ಲೋ ಗುಲ್ಲು.
ಜಯ ಹಾ, ಜಯ ಹೀ, ಜಯ ಹೇ ಹೋ ಹೋ!

ಭಂಡರು ಲಂಡರು ಆಳಲು ನಿಂದಿರೆ
ಚಿಂತೆಯದೇಕೆ ನಿಮಗೇನ್ ತೊಂದರೆ
'ಆದರೆ ಹೋದರೆ ಹತ್ತಿಯು ಬೆಳೆದರೆ
ಅಜ್ಜಿಗೆ ಒಂದು ಪಟ್ಟೆಯ ಸೀರೆ'

ಅತಿ ಹೆಚ್ಚಿನ ಭಂಡರ ಲಂಡರ ಗೆಲಿಸಿರಿ
ಭಾರತಾಂಬೆಗೆ ಚಿತೆಯನು ಉರಿಸಿರಿ
ಚಿಂತೆಯನುಳಿದು ಸತಿಯಳ ಸ್ಮರಿಸಿರಿ

ಉಜ್ವಲ ಭವಿಷ್ಯ ನಮ್ಮದು ನೋಡಿ
ಉಜ್ವಲ ಜ್ವಾಲೆಯ ನಂದಿಸಬೇಡಿ,
ಉರಿಯಲಿ ಸಕಲ ಸದಾಶಯ ಮೋಡಿ!



---

'ಇವತ್ತೇನಾಯ್ತು ಅಂತಿ'

'ನಂಗೇನು ಗೊತ್ತು'

'ದೆವ್ವದ ಕಥೆ ಓದುತ್ತಾ ಕೂತಿದ್ದೆ. ಮನಸ್ಸೆಲ್ಲಾ ಕಥೆಯ ಮೇಲೇ ಇತ್ತು. ಯಾಕೋ ಭಯ ಆಯ್ತು ಬಾಗಿಲಕಡೆ ನೋಡಿದೆ ದೆವ್ವಾನೇ ನಿಂತಿದ್ದ ಹಾಗೆ ಕಂಡಿತು ಅಯ್ಯಯ್ಯೊ ಅಂತ ಕೂಗಿದೆ.

'ಯಾಕಪ್ಪಾ ! ಏನಾಯ್ತಪ್ಪ' ಅಂತ ಬಾಗಿಲುವಾಡದಲ್ಲಿ ನಿಂತಿದ್ದ ಅತ್ತೆ ಕೇಳಿದರು.

---

# ಪಡುವಣ ಯಾತ್ರೆ-೩

—ಡಾ॥ ಆನಂದ್

## ವಾಶಿಂಗ್‌ಟನ್

ಸಂಜೆ ವಾಶಿಂಗ್‌ಟನ್ ನಗರ ನೋಡಲು ಹೊರಟೆವು. ಸುಂದರವಾದ ತೋಟಗಳು, ಎಲ್ಲೂ ನಂ ದೇಶದ ತರಹ ಕಸದ ತಾಂಡವ ಇಲ್ಲ! ಭವ್ಯವಾದ ಭವನಗಳು, ಬಾಯಿ ಬಿಟ್ಟುಕೊಂಡು ನೋಡುತ್ತಿದ್ದೆ. ವಾಟರ್‌ಗೇಟ್ ಹೋಟಲು ತೋರಿಸಿದ ಗೈಡು. ಆಗ ನೆನಪಿಗೆ ಬಂತು, ವಾಶಿಂಗ್‌ಟನ್ ಕತೆ. ಅವನು ಹುಡುಗನಾಗಿದ್ದಾಗ ತಂದೆ ನೆಟ್ಟಿದ್ದ ಮರ ಕಡಿದಿದ್ದು ತಾನೇ ಅಂತ ಸತ್ಯ ಹೇಳಿದ ನಂತೆ! ಆಗಿನ ಕಾಲಕ್ಕೂ ಈಗಿನ ನಿಕ್ಸನ್ ಸುಳ್ಳಿನ ಸುರಿಮಳೆಗೂ ಎಷ್ಟು ಅಂತರ? ಭಾರತದ ಬೊಫೋರ್ಸ್ ಜ್ಞಾಪಕಕ್ಕೆ ಬಂತು. ಅಂತೂ ರಾಜಕಾರಣಿಗಳು ಎಲ್ಲ ದೇಶದಲ್ಲೂ ಒಂದೇ ತರಹ ಅಂತ ಸಮಾಧಾನ ಪಟ್ಟುಕೊಂಡೆ.

ಲಿಂಕನ್ ಮೆಮೋರಿಯಲ್. ಪಾಪ, ಲಿಂಕನ್ ಎಷ್ಟು ವರ್ಷದಿಂದ ಹೀಗೇ ಕೂತಿದಾನೋ? ಜೀವ ಬಂದರೆ ಏನು ಮಾತಾಡ್ತಾನೋ ಅಂತ ಭಯ ಆಯ್ತು, ಸರಸರನ ಹೊರಗೆ ಬಂದೆ! ಭವನದ ಮೆಟ್ಟಿಲ ಮೇಲೆ ಇಬ್ಬರು ಜಪಾನೀ ತರುಣಿಯರು, ಕಿಲಕಿಲ ನಗುತ್ತ ನನ್ನ ಹತ್ರ ಓಡಿ ಬಂದರು. ಭಯ ಆಯ್ತು! ಏನು ಅಂತ ಮುಖದಲ್ಲೇ ಕೇಳಿದೆ. 'ಪ್ಲೀಸ್ ಟೇಕ್ ಅವರ್ ಫೋಟೋ' ಅಂತ ಅವರ ಕ್ಯಾಮೆರಾ ನನ್ನ ಕೈಗೆ ಕೊಟ್ಟು ನಿಂತರು. ನನ್ನ ಪೆಪ್ಪು ಮುಖ ನೋಡಿವರೂ ಧೈರ್ಯವಾಗಿ ಕ್ಯಾಮೆರಾ ನನ್ನ ಕೈಗೆ ಕೊಟ್ಟರಲ್ಲ ಅಂತ ಆಶ್ಚರ್ಯ ಆಯ್ತು, 'ರೆಡೀ' ಅಂದೆ. ಅರ್ಥವಾಗಲಿಲ್ಲ ಅವರಿಗೆ! 'ಲೆಡೀ?' ಅಂದೆ. 'yes' ಅಂದರು, ಕ್ಲಿಕ್ ಮಾಡಿದೆ. ಅವರ ತಲೆಗಳೆರಡೂ ಕಟ್ ಆಗಿದೆ ಅಂತ ಅವರಿಗೆ ಗೊತ್ತಾಗೋದರಲ್ಲಿ ನಾನು ಬೆಂಗಳೂರಲ್ಲಿ, ಅವರು ಜಪಾನಲ್ಲಿ ಅಂತ ಸಮಾಧಾನಪಟ್ಟುಕೊಂಡೆ.

ವಾಶಿಂಗ್‌ಟನ್ ರೈಲಿನ ಸುದ್ದಿ ಕೇಳಿ. ಭೂಗತ ರೈಲು ಸಿಸ್ಟಂ ಬಹಳ ಚೆನ್ನಾಗಿದೆ. ಮೆಟ್ಟಿಲುಗಳನ್ನ ಇಳೀತ, ಇಳೀತ ಕೆಳಕ್ಕೆ ಹೋಗಬೇಕು. ಟಿಕೆಟ್ ಮಾರುಕ್ಕೆ ಯಾರೂ ಇರುಲ್ಲ. ಎಲ್ಲ ಮೆಶೀನುಗಳು.ಡಾಲರ್ ಹಾಕಿದರೆ ಟಿಕೆಟ್ಟು ತಾನೇ ಬರುತ್ತೆ. ಅದನ್ನು ಗೇಟು ತೆಗೆಯುಕ್ಕೆ, ಸ್ಟೇಷನ್ ಒಳಕ್ಕೆ ಹೋಗುಕ್ಕೆ ಉಪಯೋಗಿಸಿದೆ. ನಂ ಸ್ಟೇಷನ್‌ಗಳ ತರಹ ಜನ, ಗಲಭೆ, ಹಣ್ಣು ಮಾರೋರು, ಬಾಳೆ ಸಿಪ್ಪೆ ಏನೂ ಇಲ್ಲ! ನಗರದಲ್ಲೆಲ್ಲ ಓಡಾಡಲು ಬಲು ಅನುಕೂಲ. ಆದರೆ ನಂ ಸ್ಟೇಷನ್‌ಗಳ ವೈಪಧ್ಯ ಅಲ್ಲಿಲ್ಲ!

ಆ ಟ್ರೈನಿನಲ್ಲಿ ಬಾಗಿಲುಗಳು ಅರ್ಧ ನಿಮಿಷ ಮಾತ್ರ ತೆಗೆದಿರತ್ತೆ. ಅಷ್ಟರಲ್ಲಿ ಎಲ್ಲ ಸರಾಗವಾಗಿ ಇಳೀತಾರೆ, ಒಳಗೆ ಬರ್‍ತಾರೆ! ನನಗೋ ಭಯ, ಬಾಗಿಲ ಹತ್ರಾನೇ ಕೂತಿದ್ದೆ, ಛಂಗ್ ಅಂತ ಎಗರಿಬಿಡೋಣ ಅಂತ. ಮುಂಬಯಿ ಸಬರ್ಬನ್ ಟ್ರೇನ್‌ಗಳ ಅನುಭವ ಇತ್ತು! ನನ್ನ ಸ್ಟೇಷನ್ ಹೆಸರು ಸ್ಮಿತ್‌ಸೋನಿಯನ್: ಅಲ್ಲೇ ಹೆಸರಾಂತ ಮ್ಯೂಜಿಯಂ ಇರೋದು. ಅಷ್ಟರಲ್ಲಿ ನನ್ನ ಮುಂದೆ ಬೃಹದಾಕಾರದ ಮಹಿಳೆ ಎದ್ದು ನಿಂತಳು. ಅವಳ ಅಡ್ಡಗಲ ಬಾಗಿಲಿನಷ್ಟೇ ಇದ್ದುದರಿಂದ ನನಗೆ ಬಾಗಿಲು ಕಾಣದೆ ತತ್ತರಿಸುವಂತಾಯಿತು! ಸುಮಾರು ಒಂದುನೂರು ಕೆ.ಜಿ. ಆದರೂ ಇರಬಹುದು ಅವಳ ತೂಕ! ಟ್ರೇನು ನಿಂತಿತು. ಅವಳು ನಿಧಾನವಾಗಿ ಇಳಿದಳು. ನಾನು ತವಕದಿಂದ ಇಳಿಯಲು ಉದ್ಯುಕ್ತನಾದ ಹಾಗೇ ಬಾಗಿಲುಗಳು ಮುಚ್ಚಲು ಆರಂಭ! 'ಬಾಲಾಜೀ! ಕಾಪಾಡಪ್ಪಾ!' ಅಂತ ಆರ್ತನಾದದೊಡನೆ ಜಂಪಿದೆ! ಸದ್ಯಕ್ಕೆ ಏನೂ ಅನಾಹುತ ಆಗಲಿಲ್ಲ! ಪ್ಲಾಟ್‌ಫಾರಂ ಮೇಲೆ ನಾನು ಚೇತರಿಸಿಕೊಳ್ಳುತ್ತಿದ್ದೆ. ಆ 'ಹಿಡಿಂಬಿ' ನನ್ನನ್ನೇ ಕೌತುಕದಿಂದ ನೋಡುತ್ತಿದ್ದಳು. 'What were you shouting just now?' ಅಂದಳು. ನಾನು (ಗಂಭೀರವಾಗಿ) 'I was offering a prayer!' ಅಂದೆ. ಅವಳ ಅಗಲವಾದ, ಗುಹೆಯಂತಹ ಬಾಯಿಯಿಂದ ನಗುವಿನ ಚಿಲುಮೆ ಹೊಮ್ಮಿತು! 'You don't have to, you know... this is not New York!' ಅಂದಳು. ಅವಳ ಗೂಢಾರ್ಥ ಆಗ ಗೊತ್ತಾಗಲಿಲ್ಲ. ನ್ಯೂಯಾರ್ಕ್ ನೋಡಿದ ಮೇಲೆ ಗೊತ್ತಾಯಿತು ಅನ್ನಿ!

ಮರುದಿನ ಸಂಜೆ ಶಾಪಿಂಗ್ ಸೆಂಟರ್‌ನ ರೆಸ್ಟುರಾಗೆ ಹೋದೆವು. ಮೆನು ಕಾರ್ಡಿನ ವಿವರಗಳನ್ನು ನೋಡಿ ನನ್ನ ಹಸಿವು ಇಂಗಿ ಹೋಯಿತು! ಅಲ್ಲ, ಒಂದು ಕಾಫಿಗೆ 24 ರುಪಾಯಿ, ಒಂದು ಸ್ಯಾಂಡ್‌ವಿಚ್‌ಗೆ 50 ರುಪಾಯಿ! ಸುನಿಲ್ ನನ್ನ ಮುಖಾನೇ ನೋಡ್ತಾ ಇದ್ದ! ಕೊನೆಗೆ ಅಂದ, 'ಡಾಕ್ಟ್ರೇ, ಡಾಲರ್‌ನ ರೂಪಾಯಿಗೆ ಕನ್ವರ್ಟ್ ಮಾಡಬೇಡಿ! ಇಲ್ದಿದ್ರೆ ಉಪವಾಸ ಇರಬೇಕಾಗುತ್ತೆ!' ಅಲ್ಲಿನ ಭಾರೀ ಅಂಗಡಿಗಳೋ, ಆಕರ್ಷಕವಾಗಿರುತ್ವೆ! ಕಷ್ಟಪಟ್ಟು, ಮೂರು ನಾಲ್ಕು ಸಾಮಾನು ಕೊಂಡೆ. ಮನೆ ತಲುಪಿದಾಗ ರಾತ್ರಿ ಹತ್ತು. ನಾಳೆ ಬೆಳಗ್ಗೆ ಫಿಲಡೆಲ್ಫಿಯಾಗೆ ಹೋಗಬೇಕು ಅಂತ ನೆನಪಿಗೆ ಬಂತು. ಬೇಗ ರಾಮಸ್ಕಂಧಂ ಹೇಳಿ ಮಲಗಿದೆ!



# ಹಿತ್ತಲ ಗಿಡ ಮದ್ದಲ್ಲ

ಕಮಲಾ ರಾಮಸ್ವಾಮಿ

---

ಭಾರತೀಯ ಬ್ಯಾಂಕೊಂದರ ಬಾಗಿಲಿಗೆ ಹೋದೆ.

"ಬನ್ನಿ, ಬೇಗ್ಬನ್ನಿ." ಬಹಳ ಉಪಚಾರದಿಂದ ಆತ ಒಳಗೆ ಕರೆದ. 'May I help you?' ಅನ್ನೋ ಬೋರ್ಡಿನ ಹತ್ತಿರ ನಿಂತಿದ್ದ. ಒಳ್ಳೇ ಮೈಕಟ್ಟು. ಬೆಳ್ಳಗೆ ಲಕ್ಷಣವಾಗಿದ್ದ ಆತ ಕುಮಾರ ಗೌರವ್ ತರಹ ಕಾಣಿಸುತ್ತಿದ್ದ. "ತಮಗೇನು ಆಗ್ಬೇಕಿತ್ತು ?" ಹಸನ್ಮುಖನಾಗಿ, ವಿನಯದಿಂದ ಕೇಳಿದ. ಈ ಅನಿರೀಕ್ಷಿತ ಉಪಚಾರದಿಂದ ದಂಗಾದೆ. "ನನಗೆ....ನನ್ನ ಸ್ವಲ್ಪ ಹಣವನ್ನ convert ಮಾಡಿಕೊಳ್ಳಬೇಕು" ಎಂದು ತೊದಲಿದೆ.

"ಓಹೋ, ದಯವಿಟ್ಟು ಈ ಬಾಗಿಲಿಂದ ಒಳಗೆ ಹೋಗಿ. ಅಲ್ಲಿರುವಾಕೆ ನಿಮ್ಮ ಎಲ್ಲಾ ಕೆಲಸಗಳನ್ನೂ ತೊಂದರೆಯಾಗದಂತೆ ಮಾಡಿಕೊಡುತ್ತಾಳೆ."

ಆತನ ನಮ್ರತೆ, ಮರ್ಯಾದೆ ಕಂಡು ಮೂರು ಹೋದೆ. "Thanks a lot" ಎಂದೆ. "ನಿಮ್ಮ ಸೇವೆಯೇ ನಮ್ಮ ಗುರಿ" ಎಂದು ಹಿಂದೆ ಇದ್ದ ಗಾಜಿನ ಬಾಗಿಲನ್ನು ತೆರೆದ. ಕಾಲಿಗೆ ತಾಕಿದ್ದು ಬಲು ಮೃದುವಾದ ಹಸಿರು ಬಣ್ಣದ ವಾಲ್ ಟುವಾಲ್ ರತ್ನಗಂಬಳಿ ಏರ್ ಕಂಡೀಷನ್‌ನ ತಂಪಾದ ಹವ ಅಂದವಾಗಿ ಜೋಡಿಸಿದ್ದ ಗುಲಾಬಿಗಳ ಹೂದಾನಿ, ಕೋಣೆಗೆ ಒಪ್ಪುವಂತಹ ಕಿಟಕಿಯ ತೆರೆಗಳು ಸುಂದರವಾದ ರಾಜಸ್ಥಾನಿ ಕುಶಲಕಲೆಯಿಂದ ಅಲಂಕೃತವಾದ ಆ ಕೊ ಠ ಡಿ ಕಣ್ಸೆಳೆಯುವಂತಿತ್ತು. ಅಲ್ಲಿದ್ದ ಸೋಫಾ ಮೇಲೆಕುಳಿತೆ ಮೆತ್ತನೆಯ ಆ ಡನ್‌ಲಪ್ ನನ್ನ ಭಾರಕ್ಕೆ ಕುಸಿಯಿತು. ನಮ್ಮ ದೇಶ ಬಡ ದೇಶ. ಎನ್ನಲು ಸಾಧ್ಯವೆ? ಎಂಥಾ ಸುಧಾರಣೆ ಸ್ವಾತಂತ್ರ್ಯ ಬಂದ ಮೇಲೆ, ನಮ್ಮ ಜನರ ವಿನಯ, ನಡತೆ, ಕೆಲಸದಲ್ಲಿ ದಕ್ಷತೆ ಎಲ್ಲಾ ಎಷ್ಟು ಬದಲಾಯಿಸಿದೆ ಎಂದುಕೊಂಡೆ.

ತೆಳ್ಳಗೆ ಬೆಳ್ಳಗೆ ಸಲ್ವಾರ್ ಕಮೀಜ್‌ನಿಂದ ಅಲಂಕೃತವಾದ ಕೋಮಲೆಯೊಬ್ಬಳು ಒಳ ಬಂದು "Good morning" ಎಂದಾಗ ಕೋಗಿಲೆ ಹಾಡಿದಂತಾಯಿತು. ಬೆಟಬೆರಗಾಗಿ ಆಕೆಯನ್ನೆ ನೋಡಿದೆ. "What can I do for you ?" ಪಕ್ಕದಲ್ಲೇ ಬಂದು ಕುಳಿತು ಮೆಲುದನಿಯಲ್ಲಿ ಕೇಳಿದಳು. ನನಗೆ ಬಾಯೇ ಕಟ್ಟಿದಂತಾಯಿತು

"I have some change....I want to convert ...." ಎನ್ನುವಷ್ಟರಲ್ಲಿ Absolutely no problem ಎಷ್ಟಿದೆ ಯಾವ ಕರೆನ್ಸಿ, ಯಾವ ಕರೆನ್ಸಿಗೆ ಬದಲಾಯಿಸಬೇಕು ಹೇಳಿ" ಎಂದಳು. 'ಇಲ್ಲ, ಇವು ನಮ್ಮ Indian coins, ಬಹಳ ದಿನದಿಂದ ಐವತ್ತು ಇಪ್ಪತ್ತೈದು ಪೈಸೆ ಕೂಡಿಟ್ಟಿದ್ದೆ....'

Oh! I see. This is foreign exchange counter. ತಾವು ಹೊರಗೆ ಆ ಹಾಲ್‌ನಲ್ಲಿರುವ ಕೊನೆಯ ಟೇಬಲ್ ಬಳಿ ಕುಳಿತವರನ್ನು ವಿಚಾರಿಸಿ" ಎಂದು ಬಾಗಿಲು ತೆರೆದು ಬೀಳ್ಕೊಟ್ಟಳು. ನಾನು ಹಿಂದಿರುಗಿ ನೋಡಿದಾಗ ಅವಳೂ, ಅವಳ ಗೆಳತಿಯೂ ಮುಸಿ ಮುಸಿ ನಗುತ್ತಿದ್ದರು.

ಆಚೆ ಬಂದು ಆ ಹಾಲ್‌ನ ಮೂಲೆಗೆ ಹೋದೆ. ಮರದ ಮೇಜಿನ ಮೇಲೆ ನೂರೆಂಟು ಕಲೆಗಳು ಕೆಂಪು ಶಾಯಿ, ನೀಲಿ ಬಣ್ಣ. ಇತ್ಯಾದಿಗಳ ಮಚ್ಚೆ. ಅದರ ಮೇಲೆ ತಗ್ಗು ನುಗ್ಗುಕಾಯಿಯಾಗಿದ್ದ ಒಂದು ತಗಡಿನ ಡಬ್ಬ ಇಟ್ಟುಕೊಂಡು ತೂಕಡಿಸುತ್ತಾ ಕುಳಿತಿದ್ದರು ವೃದ್ಧರೊಬ್ಬರು. ನನ್ನನ್ನು ಕಂಡು ಕನ್ನಡಕ ಸರಿ ಮಾಡಿಕೊಂಡು "ಏನಾಗಬೇಕಿತ್ತು ?" ಎಂದರು.

ಮಾತಾಡದೆ ಕೈಲಿದ್ದ ಚಿಲ್ಲರೆ ಚೀಲ ಅವರಿಗೆ ಕೊಟ್ಟೆ. ಐದು ವರ್ಷದ collection. "ಅಲ್ಲಿ ಸ್ಟೂಲಿನ ಮೇಲೆ ಕೂಡಿ ಎಣಿಸಿ ಅನಂತರ ಹಣ ಕೊಡುತ್ತೇನೆ" ಎಂದರು. ಪಕ್ಕದಲ್ಲೇ ಇತ್ತು ಕುಂಟುವ ಸ್ಟೂಲು. ಹತ್ತಿರದಲ್ಲೇ ಥೂಕದಾನಿ. ನೆಲವೆಲ್ಲಾ ತಾಂಬೂಲದ ರಸದಿಂದ ಕೆಂಪಾಗಿತ್ತು. ಬಿಸಿಲು ಝಳ ಬೇರೆ. ಫ್ಯಾನ್ ಇಲ್ಲ. ಬಿಸಿಲಿನಿಂದ ಬೆವರು ಒರಸಿಕೊಂಡು ಕುಳಿತೆ. ಅಷ್ಟರಲ್ಲೇ ಯುವಕನೊಬ್ಬ ಸಿಗರೇಟ್ ಹಚ್ಚಿಕೊಳ್ಳುತ್ತಾ ಬಂದ. ಹಣ ಎಣಿಸುತ್ತಿದ್ದವರನ್ನು ಕಾಫಿಗೆ ಬರುತ್ತೀರಾ ? ಓಹ್! ಯಾವ ಕಬಾಡಿ (ಕಾಲಿ ಸೀಸಾ, ಹಳೇ ಪೇಪರ್) collection ಅಪ್ಪಾ ಇದು?" ಎಂದು ಜೋರಾಗಿ ನಕ್ಕ.

"ಶ್ಯೂ"…. ಆತ ಸಂಜ್ಞೆ ಮಾಡಿದ. ನಗು ತಡೆದುಕೊಂಡು ಆತ ಹೊರಟು ಹೋದ. ನಮ್ಮ ದೇಶದ ಹಣ, ಕಾಸಿಗೆ ಏಕಿಷ್ಟು ತಾತ್ಸಾರ, ಈ ಮಲತಾಯಿ treatment ಎಂದು ಇನ್ನೂ ಅರ್ಥವಾಗಿಲ್ಲ ನನಗೆ.



# ದೊಡ್ಡ ಮನೆಯಲ್ಲಿ ಚಿಕ್ಕ ಮಕ್ಕಳು

—ಲೀಲಾ ಮಿರ್ಜಿ

ದೊಡ್ಡ ಸಂಸಾರದಲ್ಲಿ ಬೆಳೆದ ನನಗೆ ಚಿಕ್ಕ ವಯಸ್ಸಿನಲ್ಲೂ ದೇವರು, ದಿಂಡಿರು ಅಂದರೆ ನಂಬಿಕೆ. ದೊಡ್ಡ ಸಂಸಾರಗಳಲ್ಲಿ ಬೆಳೆಯುವ ಮಕ್ಕಳಿಗೆ ಇದು ಅನಿವಾರ್ಯ. ತಂದೆ ತಾಯಿಗಳ ನೂರೆಂಟು ತಾಪತ್ರಯಗಳಲ್ಲಿ ಮಕ್ಕಳನ್ನ ಕೇಳೋರೇ ಇರಲ್ಲ. ಅವುಗಳ ಕಷ್ಟಗಳನ್ನು ಪರಿಹರಿಸುವುದಕ್ಕೆ ದೇವರೇ ಗತಿ. ಹಾಗಾಗಿ ದೇವರ ಪರಿಚಯ ನನಗೆ ಸಣ್ಣ ವಯಸ್ಸಿನಲ್ಲೇ ಆಯಿತು.

ಸರಿ, ನಮ್ಮ ಸೋದರತ್ತೆ ಪೂಜೆ ಮಾಡುತ್ತಿದ್ದಾಗ ನಾನೂ ಅವರ ಜೊತೆ ಕೈ ಮುಗಿದುಕೊಂಡು ನಿಲ್ಲುತ್ತಿದ್ದೆ. ಕೆಲವು ಸ್ತೋತ್ರಗಳನ್ನೂ ಕಲಿತೆ. ಅದರಲ್ಲಿ "ಶ್ರೀ ಮಹಾಲಕ್ಷ್ಮ್ಯಷ್ಟಕಂ" ನನಗೆ ತುಂಬ ಅವಶ್ಯಕವಾದ ಸ್ತೋತ್ರವಾಗಿತ್ತು. ಸಂಸ್ಕೃತ ಅರ್ಥವಾಗದಿದ್ದರೂ ಆಯಾ ವೇಳೆಗೆ ನನಗೆ ಅನುಕೂಲವಾಗುವ ಹಾಗೆ ಅವುಗಳನ್ನು ನಾನು ಅರ್ಥ ಮಾಡಿಕೊಳ್ಳುತ್ತಿದ್ದೆ.

ನಾಲ್ಕನೆಯ ಕ್ಲಾಸಿನಲ್ಲಿದ್ದ ನಾನು, ಒಮ್ಮೆ ಬೆಲ್ಲದಚ್ಚಿನ ಮೇಲಿದ್ದ ಒಂದು ಗೊದ್ದವನ್ನು ಹೊಸೆದು ಹಾಕಿ ಖುಷಿ ಪಟ್ಟೆ. ಮಾರನೆಯ ದಿನವೇ ಯಾವುದೋ ಕಥೆಯನ್ನು ಹೇಳುತ್ತಾ ನಮ್ಮ ಚಿಕ್ಕಮ್ಮ, ಕ್ರಿಮಿ ಕೀಟಗಳನ್ನು ಸಾಯಿಸಿದರೆ ನರಕದಲ್ಲಿ ದೊಡ್ಡ ಬಾಂಡ್ಲೆ ಇಟ್ಟು, ಕಾದ ಎಣ್ಣೆಯಲ್ಲಿ ಕೀಟ ಹಿಂಸೆ ಮಾಡಿದವರನ್ನು ಹುರಿಯುತ್ತಾರೆ ಎಂದರು. ನನ್ನ ಎದೆ ಡವ ಡವಗುಟ್ಟಿತು. ಛೆ. ಸುಮ್ಮನಿರಲಾರದೆ ಆ ಗೊದ್ದಾನ ಏಕೆ ಸಾಯಿಸಿದೆ ಅಂತ ಒದ್ದಾಡಿದೆ. ಇಡೀ ರಾತ್ರಿ ನಿದ್ದೆ ಬರಲಿಲ್ಲ. ಮಾರನೆಯ ದಿನ ಲಕ್ಷ್ಮೀ ಅಷ್ಟಕದಲ್ಲಿ "ಏಕ ಕಾಲೇ ಪಠೇನ್ನಿತ್ಯಂ ಮಹಾಪಾಪ ವಿನಾಶನಂ" ಎಂದು ಪಠಿಸಿದಾಗ ತಲೆಯ ಮೇಲೆ ಹಾಲು ಸುರಿದ ಹಾಗಾಯಿತು. ನಾನು ಅದನ್ನು ಹೀಗೆ ಅರ್ಥ ಮಾಡಿಕೊಂಡೆ. 'ನಿತ್ಯ ಪಠದ ಎದುರಿಗೆ ನಿಂತು ಈ ಶ್ಲೋಕ ಹೇಳಿದರೆ ಯಾವ ಪಾಪವಾದರೂ ಹೋಗುತ್ತದೆ' ಎಂದು ಅಬ್ಬ ಎಂತಹ ಶ್ಲೋಕ! ಗೊದ್ದ ಸಾಯಿಸಿದ ಮಹಾಪಾಪದ ಭಯವನ್ನು ಕ್ಷಣ ಮಾತ್ರದಲ್ಲಿ ನಿವಾರಿಸಿತ್ತು ಸ್ತೋತ್ರದ ಆ ವಾಕ್ಯ.

''ದ್ವಿಕಾಲಂ ಯಃ ಪಠೇನ್ನಿತ್ಯಂ ಧನಧಾನ್ಯ ಸಮನ್ವಿತಃ'' ಎನ್ನುವಾಗ ನನಗೆ ತುಂಬ ಮುಜುಗರವಾಗುತ್ತಿತ್ತು. ಇದನ್ನು ಹೇಳಿದರೆ ಮನೆಯಲ್ಲಿ ಧಾನ್ಯ ಹೆಚ್ಚುತ್ತದೆ ಎಂದು ಅರ್ಥಮಾಡಿಕೊಂಡ ನನಗೆ, ಇದು ಇಷ್ಟವಾಗಲಿಲ್ಲ. ಕಾರಣ, ನಾನು ಪೂರ್ತಿ ಊಟ ಮಾಡದೆ, ತಟ್ಟೆಯಲ್ಲಿ ಅನ್ನ ಬಿಟ್ಟರೆ. ನಮ್ಮ ತಾಯಿ ಬೈದು, "ತಿಂದು ಮುಗಿಸು, ಇಲ್ಲದಿದ್ದರೆ ಅದನ್ನ ನಿನ್ನ ತಲೆಗೆ ಕಟ್ತೀನಿ" ಎನ್ನುತ್ತಿದ್ದರು. ಡಬ್ಬದಲ್ಲಿ ಅಕ್ಕಿ ಇರುವುದರಿಂದಲೇ ನನಗೆ ಈ ಊಟದ ತಾಪತ್ರಯ. ಅದು ಇನ್ನೂ

ಹೇಳ್ತಾದರೆ. ನನ್ನ ಹಾದು ! ಸ್ತೋತ್ರದ ಈ ಲೈನನ್ನು ನುಂಗಿಕೊಂಡೇ ಮೊಲುದಿ ಯಲ್ಲಿ ಹೇಳುತ್ತಿದ್ದೆ.

ಎಲ್ಲಕ್ಕಿಂತ ಹೆಚ್ಚಾಗಿ ನನ್ನ ಶಾಲಾ ಜೀವನದಲ್ಲಿ ಪರುಷೇಯುಗಳಾದಾಗ, ನನಗೆ ಧೈರ್ಯ ನೀಡುತ್ತಿದ್ದುದೂ ಈ ಸ್ತೋತ್ರವೇ. ನಾಲ್ಕನೆಯ ಕ್ಲಾಸಿನಲ್ಲಿ ಓದುತ್ತಿರುವ ಹುಡುಗಿಗೆ ತಾಪತ್ರಯಗಳು ಕಮ್ಮಿಯೆ? ಬೆಂಚಿನ ಮೇಲೆ ನಿಲ್ಲುವ ಅವಮಾನ, ಯಾರವೋ ಪೆನ್ಸಿಲ್ಲನ್ನು ನನ್ನ ಚೀಲದಲ್ಲಿ ಹಾಕಿ ನನ್ನ ಮೇಲೆ ಮಿಥ್ಯಾರೋಪ, ಇತ್ಯಾದಿ ದಿನ ಬೆಳಗಾದರೆ ನಾನಾ ಸಂಕಟಗಳು.

ಒಂದು ದಿನ ಶಾಲೆಗೆ ನಾನು ಹೊಸಾ ಕೆಂಪು ರಿಬ್ಬನನ್ನು ಕಟ್ಟಿಕೊಂಡು ಹೋದೆ. ಮಾರನೆಯ ದಿನವೂ ಇನ್ನೊಂದು ನೀಲಿ ರಿಬ್ಬನನ್ನು ಕಟ್ಟಿಕೊಂಡು ಹೋದ ಬಳಿಕ ಗೆಳತಿ ಸಲ್ಮಾ ನನ್ನ ಜೊತೆ ಬಿಟ್ಟಳು. ನನಗೆ ಆಕಾಶವೇ ತಲೆಯ ಮೇಲೆ ಬಿದ್ದ ಹಾಗಾಯಿತು. ಸಾಲದ್ದಕ್ಕೆ ನಮ್ಮ ಗುಂಪಿನ ಮಿಕ್ಕವರೆಲ್ಲರಿಗೂ ನನ್ನ ಮೇಲೆ ಚಾಡಿ ಹೇಳಿ, ನನ್ನನ್ನು ಗುಂಪಿನಿಂದ ಆಚೆ ಹಾಕಿದಳು. ನನ್ನ ಜೀವನದ ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ನನಗೆ ಸಮಾಧಾನ ಕೊಟ್ಟದ್ದು ಈ ಸ್ತೋತ್ರದ ಕೊನೆಯ ಸಾಲು. ''ತ್ರಿಕಾಲಂ ಯಃ ಪಠೇನ್ನಿತ್ಯಂ ಮಹಾ ಶತ್ರು ವಿನಾಶನಂ''—ಅಂದರೆ ಇದನ್ನು ಹೇಳುವುದರಿಂದ ನನ್ನ ಆಪ್ತ ಗೆಳತಿಯಾಗಿದ್ದ ರಿಬ್ಬನ್ನಿನ ಕಾರಣವಾಗಿ ಮಹಾಶತ್ರು ವಾದ ಸಲ್ಮಾ ವಿನಾಶವಾಗುತ್ತಾಳೆ. (ವಿನಾಶವೆಂದರೆ ಸಾಯುವುದೂ ಆಗಬಹುದೆಂದು ನನಗೆ ಗೊತ್ತಿತ್ತು. ಆದರೆ ಸಲ್ಮಾ ಸಾಯುವುದು ನನಗೆ ಇಷ್ಟವಾಗಲಿಲ್ಲವಾದ್ದರಿಂದ, ವಿನಾಶವೆಂದರೆ ಕಣ್ಣಿಗೆ ಕಾಣಿಸದೆ ಇರುವುದು ಎಂದು ಅರ್ಥ ಮಾಡಿಕೊಂಡು ಬಿಟ್ಟೆ) ಸಧ್ಯ ಅವಳು ಎಲ್ಲಿಗೋ ತೊಲಗುತ್ತಾಳೆ. ಮುಕ್ಕಾಲು ಪಾಲು ಶಾಲೆ ಬಿಡಬಹುದು. ಎಂದು ಸಮಾಧಾನ ಮಾಡಿಕೊಂಡೆ. ತಕ್ಷಣ ಒಂದು ಸಂದೇಹ ಬಂತು. ಅಪ್ಪಿ ತಪ್ಪಿ ಸಲ್ಮಾ ಸಹ ಈ ಸ್ತೋತ್ರವನ್ನು ಹೇಳಿ ಬಿಟ್ಟರೆ. ಆಗ ಅವಳ ಪರಮಶತ್ರುವಾದ ನಾನೂ ನಾಶವಾಗುತ್ತೇನೆ. ಇದೆಂತಹ ಫಜೀತಿ! ಒಮ್ಮೆಲೆ ಜ್ಞಾಪಕ ಆಯಿತು, ಅವಳು ಮುಸಲ್ಮಾನರ ಹುಡುಗಿ. ಅಂದಮೇಲೆ ಸಧ್ಯ, ಅವಳಿಗೆ ಈ ಸ್ತೋತ್ರಗಳೇ ತಿಳಿದಿರುವುದಿಲ್ಲ. ಬದುಕಿತು ಬಡಜೀವ ಎಂದುಕೊಂಡೆ.

ಹೀಗೆ ದೇವರನ್ನು ಸಂಪರ್ಕಿಸಲು ಇದ್ದ ಶ್ಲೋಕ, ದೇವರ ನಾಮಗಳಂದ ಸ್ವ-ಭಾಷ್ಯ ನಿಮಿತ್ತ, ತುಂಬ ಉಪಯೋಗವಾಗುತ್ತಿತ್ತು. ಈಗ ವಯಸ್ಸಾದ ಮೇಲೆ ಮಹಾ ಶತ್ರುವೆಂದರೆ, ನಮ್ಮಲ್ಲಿರುವ ದುರಾಸೆ, ಸೋಮಾರಿತನ, ಸಣ್ಣತನ ಮುಂತಾದವುಗಳೂ, ಮಹಾ ಪಾಪವೆಂದರೆ ನಮ್ಮ ದುಷ್ಟ ಆಲೋಚನೆಗಳು ಎಂದೆಲ್ಲಾ ಅರ್ಥವಾದ ಮೇಲೆ, ನನಗೆ ಬೆಂಬಲವಾಗಿದ್ದ ಆ ಶ್ಲೋಕಗಳ ಸೊಬಗೇ ಕಮ್ಮಿಯಾದ ಹಾಗೆ ಅನ್ನಿಸುತ್ತದೆ.

ಅದಕ್ಕೇ ಮಕ್ಕಳಿಗೆ ಯಾವುದೂ ಪೂರ್ತಿ ಅರ್ಥವಾಗದ ಹಾಗೆ ಲಕ್ಷ್ಮೀ ನೋಡಿ ಕೊಂಡಿರಬೇಕು !

# ಪ್ರಜಾಪ್ರಭುತ್ವ-ಒಂದು ಮುಖ

—ಶಿವು

---

ಸಂಜೆಯ ವೇಳೆ. ಕ್ಲಬ್ಬಿನ ಬಾರಿನಲ್ಲಿ, ಪ್ರಜಾಪ್ರಭುತ್ವದ ಬಗ್ಗೆ ಕಾವೇರಿದ ಚರ್ಚೆ ''ನೀ ಏನೇ ಹೇಳು ರಾಜೀವ್‌ಗಾಂಧಿ ಟಿ.ವಿ. ಡಿಬೇಟ್‌ಗೆ ಆಹ್ವಾನ ನೀಡಿ ಅನಂತರ ಹಿಂದೇಟು ಹಾಕಿದ್ದು ತೀರಾ ನಾಚಿಗ್ಗೇಡು. ಅಮೇರಿಕಾದಲ್ಲಿ ಹಿಂದೆ ನಿಕ್ಸನ್-ಕೆನಡಿ ಚರ್ಚೆ ನಡೆದ ಹಾಗೆ ಇಲ್ಲೂ ಸಹಾ ರಾಜೀವ್-ವಿ.ಪಿ. ಚರ್ಚೆ ನಡೆದಿದ್ದರೆ....ಆಗ ಮಜಾ ಇರೋದು" ಚಂದ್ರಣ್ಣ ತುಸು ಆವೇಶದಿಂದಲೇ ನುಡಿದ.

"ಅದು ಟೀಂ ಇವೆಂಟ್ ಕಣೋ, ಚಂದ್ರು. ರಾಜೀವ್ ಅವರದ್ದೇನೂ ತಪ್ಪಿಲ್ಲ. ನಮ್ಮ ಟೀಂನೋರು ನಿಮ್ಮ ಟೀಂನೋರ ಜಿತೆ ಚರ್ಚಿಸ್ತೇವೆ ಅಂತ್ಲೇ ರಾಜೀವ್ ಹೇಳಿದ್ದು, ಕೆ.ಕೆ. ತಿವಾರಿ ವರ್ಸಸ್ ಜೀವರಾಜ್ ಆಳ್ವ ಅಂತ ಈಗ್ಲೂ ಮಾಡ್ಬೋದಲ್ಲ",

ಬಾಲಕೃಷ್ಣ ಮಾತು ಸೇರಿಸಿದ.

ಹಠಾತ್ತನೆ ಬಾರ್‌ನಲ್ಲಿ ನೀರವತೆ. ಬಾಗಿಲ ಕಡೆ ನೋಡಿದೆ. ದೇವಾನಂದಾನಿ ಒಳಕ್ಕೆ ಬರುತ್ತಿದ್ದ. ಅವ ಬಂದು ಕೂರುಕ್ಕಿಲ್ಲ, ಬೇರರ್ ಜೋಸೆಫ್ ಭಕ್ತಿಯಿಂದ ಒಂದು ಗ್ಲಾಸ್ ಡ್ರಾಫ್ಟ್ ಬೀರ್, ಒಂದು ತಟ್ಟೆ ರಾಜಾ ಮಸಾಲಾ ತಂದು ಅವನ ಅವನ ಮುಂದಿಟ್ಟ.

ದೇವಾನಂದಿನಿ. ಸಾವಧಾನವಾಗಿ ಒಂದು ಗುಟುಕು ಬೀರ್ ಹೀರಿ, ''ಏನು, ಬಿಸಿ ಬಿಸಿ ಚರ್ಚೆ ನಡೀತಿದ್ದ ಹಾಗಿತ್ತಲ್ಲಾ ?'' ಅಂತ ಕೇಳಿದ.

''ಏನಿಲ್ಲ ದೇವು ರಾಜೀವ್‌ಗಾಂಧಿ; ವಿ. ಪಿ. ಸಿಂಗ್ ಇವರುಗಳ ಮಧ್ಯೆ ಟಿ.ವಿ. ಚರ್ಚೆ ನಡೆದಿದ್ದರೆ, ನಮ್ಮ ದೇಶದ ಪ್ರಜಾಪ್ರಭುತ್ವಕ್ಕೆ ಮೆರಗು ಕೊಟ್ಟ ಹಾಗಾಗ್ತಿತ್ತು ಅಂತ ಹೇಳ್ತಾ ಇದ್ದೆ. ಅಷ್ಟೆ'', ಚಂದ್ರು ಉವಾಚ.

ದೇವಾನಂದಾನಿ, ಅಪ್ಪಟ ಸಿಂಧಿ ಕನ್ನಡಿಗ. ಮುಕ್ಕಾಲುಪಾಲು ಕನ್ನಡ ಚಿತ್ರಗಳಿಗೆ ಚಿತ್ರಕಥೆ ಮತ್ತು ಸಂಭಾಷಣೆ ಅವನೇ ಬರಿಯೋದು. ಬಲು ಮಾತು ಗಾರ. ಕ್ಲಬ್ಬಿನಲ್ಲಿ ಅವನಿದ್ದಾಗಲೆಲ್ಲಾ ಅವನದ್ದೇ ದರ್ಬಾರ್.

'ಖಂಡಿತಾ ಸಾಧ್ಯವಿಲ್ಲ.' ಭಾರತದ ಪ್ರಜಾಪ್ರಭುತ್ವಕ್ಕೆ ವಿದೇಶಿ ಮಾದರಿಯ ಟಿ.ವಿ. ಚರ್ಚೆ ಎಂದಿಗೂ ಶೋಭಿಸೋದಿಲ್ಲ. ಭಾರತ ಎಂತಹ ಪುರಾತನ ದೇಶ! ಎಷ್ಟು ಮಹತ್ತಾದ ಪರಂಪರೆ! ಎಲ್ಲಾ ಬಿಟ್ಟು, ಬಿಳೀ ತೊಗಲಿನೋರು ಮಾಡಿದ್ರು ಅಂತ ರಾಷ್ಟ್ರದ ಪ್ರಧಾನೀನ ಟಿ.ವಿ. ಮುಂದೆ ಚರ್ಚೆಗೆ ನಿಲ್ಲಿಸೋದೆ? ನ ತರಾಂ ಶಕ್ಯ ಮ"—ಒಂದು ಚಮಚಾ ಕಡಲೇಕಾಯಿ ಗುರಿತಪ್ಪದೇ ದೇವು ಬಾಯಿ ಸೇರಿತು.

"ಮತ್ತೆ ಇಬ್ಬರಲ್ಲಿ ಯಾರು ಉತ್ತಮ ಅಂತ ಜನತೆ ನಿರ್ಧರಿಸೋದು ಹೇಗೆ?" ಚಂದ್ರಣ್ಣ ದೇವೂಗೆ ಯಾವಾಗಲೂ **straight man.**

''ಅದೇನು ಬಲು ಸುಲಭ. ದ್ಯೂತ—ಅರ್ಥಾತ್ ಪಗಡೆ ಆಟ. ಮಹಾ ಭಾರತ ನೋಡಿಲ್ವೇ. ರಾಜ ಮಹಾರಾಜರುಗಳ ಆಟ ಅದು. ರಾಜಾ ರಾಜೀವರಿಗೂ ರಾಜಾ ಸಾಹೇಬರಿಗೂ ಅದೇ ಘನತೆಗೆ ತಕ್ಕ ಸ್ಪರ್ಧೆ.''

"ಆದರೆ ಪಗಡೇ ಆಟನಾ ಟಿ.ವಿ.ನಲ್ಲಿ...." ಬಾಲೂ ಮಾತನ್ನ ಅಲ್ಲಿಗೇ ತುಂಡರಿಸಿ ದೇವೂ ಶುರು ಮಾಡಿದ.

''ಮಧ್ಯೆ ಬಾಯಿಹಾಕಬೇಡ, 'ಬಾಲು. ಮಹಾಭಾರತದ ಅನಂತರ, ಅದಕ್ಕಿಂತ ಮಹತ್ತರವಾದ ಪಗಡೇ ಆಟದ ಚಿತ್ರ ಕಣ್ಣ ಮುಂದೆ ಬರ್‍ತಾ ಇದೆ. ಇಂತಹ ಆಟ ಹಿಂದೆ ಆಡಿರಲಿಲ್ಲ, ಮುಂದೆ ಆಡೋಲ್ಲ. ನವದೆಹಲಿಯ ವಿಜ್ಞಾನ್ ಭವನ್‌ನಲ್ಲಿ ಒಂದು ಭವ್ಯವಾದ ವೇದಿಕೆ. ವೇದಿಕೆಯ ಮೇಲೆ, ಅಂಚಿನಿಂದ ಅಂಚಿನವರೆಗೂ ಕಾಶ್ಮೀರೀ ರತ್ನಗಂಬಳಿ— ಅಂದ್ರೆ ಕಾರ್ಪೆಟ್ ಕಣ್ರೋ, ಕನ್ನಡಮ್ಮನ ಕಂದಮ್ಮಗಳಿರಾ— ಮಧ್ಯ ಒಂದು ಪಗಡೆ ಹಾಸು. ಬಲ ಭಾಗದಲ್ಲಿ ದಿಂಬಿಗೆ ಒರಗಿ ರಾಜಾ ರಾಜೀವ್ ವಿಜೃಂಭಿಸುತ್ತಿದ್ದಾರೆ, ಎಡಗಡೆ ರಾಜಾ ಸಾಹೇಬರು ತಮ್ಮ ಅನುಯಾಯಿಗಳೊಂದಿಗೆ ವಿರಾಜಮಾನರಾಗಿದ್ದಾರೆ....''

'ಶಕುನಿ ಯಾರು'? ರಾಜಣ್ಣ ಮಧ್ಯೆ ಬಾಯಿ ಹಾಕಿದ, ತೀರಾ ಅವಸರದ ಪ್ರಾಣಿ,

''ನಿಮ್ಮಪ್ಪ. ರಸಭಂಗ ಮಾಡ್ಬಾರ್ದೂ ಅಂತ ಮೊದ್ಲೇ ಹೇಳಲಿಲ್ವೆನೋ, ಗುರೂ, ಹ್ಞಾ, ಶಕುನಿ—ಶಕುನಿ ಯಾರು? ಶಕುನೀಗೆ ದಾಳಾನ ಹೇಗೆ ಬೇಕೋ ಹಾಗೆ ಉರುಳಿಸೋದಕ್ಕೆ ಬರ್‍ತಾ ಇತ್ತು. ಈ ಕಲಿಗಾಲದಲ್ಲಿ ಹಾಗೆ ಉರುಳಿಸೋದಕ್ಕೆ ಸಾಧ್ಯವೇ ?—ಹೈಟೆಕ್ ಸಹಾಯದಿಂದ ಖಂಡಿತಾ ಸಾಧ್ಯ. ಎರಡು ದಾಳಗಳ ಮೇಲೂ ಕರೀ ಚುಕ್ಕೆಗಳಿರುತ್ವಲ್ಲ, ಅವು ಸಾಮಾನ್ಯ ಚುಕ್ಕೆಗಳಲ್ಲ **L.E.D.** ಚುಕ್ಕೆಗಳು, ಕ್ಯಾಲ್ಕುಲೇಟರ್‌ನಲ್ಲಿ 8 ಅನ್ನೋ ಅಂಕೀನ **L.E.D.**

ನಲ್ಲಿ ಬರೆದು, ಆಮೇಲೆ ಯಾವ ಅಂಕಿ ಬೇಕೋ ಅದನ್ನ ಮಾತ್ರ ಸ್ವಿಚ್ ಆನ್ ಮಾಡುಲ್ವೇ ? ಹಾಗೇನೇ, ದಾಳಗಳ ನಾಲ್ಕು ಮುಖಗಳ ಮೇಲೂ ಆರು ಆರು ಚುಕೆಗ್ಗಳು. ರಿಮೋಟ್ ಕಂಟ್ರೋಲ್‌ನಿಂದ ಯಾವ ಚುಕ್ಕೆ ಬೇಕಾದ್ರೂ ಆನ್ ಮಾಡಬಹುದು. ದಾಳ ಉರುಳಿಸಿದ ಮೇಲೆ ಚಾರ್ ಅಂದ್ರೆ ಆ ಧ್ವನೀನ ಕಂಪ್ಯೂಟರ್ ನಾಲ್ಕು ಅಂತ ಗುರುತಿಸಿ, ರಿಮೋಟ್ ಮೂಲಕ ದಾಳಗಳ ಮೇಲ್ಮುಖದಲ್ಲಿ ನಾಲ್ಕೇ ಚುಕ್ಕೆಗಳು ಕಾಣೋ ಹಾಗೆ ಮಾಡುತ್ತದೆ. ಸಹಜವಾಗಿ ಇಂತಹ ಹೈಟೆಕ್ ದಾಳ ಗಳನ್ನ ತಯಾರಿಸಿರೋವ್ರು L & T. ಟಿ.ವಿ. ಜಾಹಿರಾತು ನೋಡಿಲ್ವೇ L & T Vision—World Class ಅಂತ, ಈಗ ಗೊತ್ತಾಯ್ತೂ ಶಕುನಿ ಯಾರು ಅಂತ—ಧೀರೂಭಾಯ್,

ಆಗೋ, ಆಟ ಇನ್ನೇನು ಶುರು ಆಗೋದ್ರಲ್ಲಿದೆ, ರಾಜೀವ್ ಪಕ್ಕದಲ್ಲಿ ಧೀರೂಬಾಯ್, ವಿ.ಪಿ, ಸಿಂಗ್ ಪಕ್ಕದಲ್ಲಿ ರಾಮಕೃಷ್ಣ ಹೆಗಡೆ.

ಪಣಾ ಏನೂ ಅಂದ್ರ? ರಾಜೀವ್ ಗೆದ್ರೆ, ವಿ.ಪಿ. ಸಿಂಗ್ 12 ವರ್ಷ ಸೇಂಟ್ ಕಿಟ್ಸ್ ಮಗನ ಮನೇಗೆ-ವಿ.ಪಿ, ಗೆದ್ರೆ, ರಾಜೀವ್ 12 ವರ್ಷ ಇಟಲೀಗೆ—ಮಾವನ ಮನೇಗೆ,

ಶುರು ಆಯ್ತು ಆಟ.

''ಹವ್ ಕೋ ಆಠ್ ಛಾಹಿಯೇ'' ಅಂದ್ರು ರಾಜೀವ್,

''ಅಭ್ಬಿ ಆತೀ ಹೈ ಭಾಂಚೆ'' ಅಂತ ಧೀರೂಭಾಯ್ ದಾಳ ಉರುಳಿಸಿದರು,

''ಆಠ್'' ಅಂತ ಕೂಗಿದರು. ಅವರ ಕೂಗನ್ನ ಕಂಪ್ಯೂಟರ್ ಗುರುತಿಸಿ ದಾಳಗಳ ಮೇಲೆ ನಾಲ್ಕು ನಾಲ್ಕು ಚುಕ್ಕೆಗಳನ್ನ ಸ್ವಿಚ್ ಆನ್ ಮಾಡಿತು. ರಾಜೀವ್ ಸಂತೋಷದಿಂದ ಕಾಯಿ ಮುಂದೆ ನಡೆಸಿದರು. ಹೀಗೇ ಮುಂದುವರಿದಿದೆ ಆಟ. ಎರಡು ಬೇಕೂಂದ್ರೆ ಎರಡು. ಹತ್ತೊಂದ್ರೆ ಹತ್ತು. ವಿಜಯ ವನಿತೆ ರಾಜೀವರ ತೀರಾ ಸಮೀಪಕ್ಕೆ ಬಂದು ನಿಂತಿದ್ದಾಳೆ.

ಇನ್ನೇನು ಕೊನೆಯ ಗರ. 'ದೋ' ಬಿದ್ದರೆ ರಾಜೀವ್ ಗೆಲುವು. ಹನ್ನೆರಡು ಬಿದ್ದರೆ ರಾಜಾ ಸಾಹೇಬರಿಗೆ ವಿಜಯ ಮಾಲಿಕೆ.

'ಹವ್, ಕೋ ದೋ ಛಾಹಿಯೇ' ಅಂದು ರಾಜೀವ್. ದಾಳ ಉರುಳಿತು. ಹೆಗಡೆಯುವರಿಗೆ ನಿರಾಶೆ ತಡೆಯಲಾಗಲಿಲ್ಲ.

'ಛೀ! ಛಿ!' ಅಂತ ಜೋರಾಗಿ ಉದ್ಗರಿಸಿದರು. ಕಂಪ್ಯೂಟರ್ ಒಂದೊಂದು ದಾಳದ ಮೇಲೂ ಆರು ಚುಕ್ಕಿಗಳನ್ನು ಸ್ವಿಚ್ ಆನ್ ಮಾಡಿತು. ಗರ-ಹನ್ನೆರಡು ! ವಿ. ಪಿ. ಗೆದ್ದರು. ರಾಜೀವ್ ಸೋತರು.

Scene shifts to ರೋಮ್‌ನ ವಿಮಾನ ನಿಲ್ದಾಣ. ರಾಜೀವರು ಪತ್ನೀ, ಪುತ್ರ, ಪುತ್ರೀ, ಸಮೇತರಾಗಿ ನಿಲ್ದಾಣದ Loungeಗೆ ಬರುತ್ತಿದ್ದಾರೆ. ಭಾವ ಮೈದುನ, ಅಕ್ಕ, ಭಾವರನ್ನು ಉತ್ಸುಕತೆಯಿಂದ ಇದಿರುಗೊಂಡು ಭಾವನ ಕೊರಳಿಗೆ 64 ಟ್ಯೂಲಿಪ್ ಗಳ ಹಾರವೊಂದನ್ನು ಹಾಕುತ್ತಾನೆ ಕಟ್'

'ಹಾರಕ್ಕೆ 64 ಹೂಗಳು ಯಾಕೆ?' ಮತ್ತೆ ರಾಜಣ್ಣ

'ಕೋಟಿ ಸೂರ್ಯ ಸಮ ಪ್ರಭ ಅನ್ನೋ ಶ್ಲೋಕ ಕೇಳಿಲ್ವೇನೋ, ಗಂಗ್ಯಾ,

ಒಂದೊಂದು ಹೂವು ಒಂದೊಂದು ಕೋಟಿಗೆ ಸಮ,' ಅಂದ ದೇವ್ರ.

ಕೆಲವರು ಹೋ ಎಂದು ನಕ್ಕರು. ಅರ್ಥವಾಗದ ನಾವು ಕೆಲವರು ಸುಮ್ಮ ನಿದ್ದೆವು. ದೇವ್ರೊನ ಪಗಡೆ ಆಟವನ್ನೇ ಮೆಲುಕುತ್ತಾ ನಾನು ಮನೆಗೆ ಹೊರಟೆ.



"ದೇವ್ರೇ! ಆ ಕಡೆ ಪ್ರಧಾನಿ ಯೋರ ಕಾಗದ, ಈ ಕಡೆ ಮುಖ್ಯ ಮಂತ್ರಿ ಯವರ ಕಾಗದ ಯಾರಿಗೆ ಉತ್ರ ಬರೀಲಪ್ಪಾ !"



"ಮುಂದೆ ಅರಾಜಕತೆ ಆದ್ರೆ, ಏನ್ಗತೀ ಅಂದ್ರಾ—ನನ್ಗೇನೊ ಭಯವಿಲ್ಲಾ. ನಮ್ಮ ಆಫೀಸಿನಲ್ಲಿ ಲಾಗಾಯ್ತಿನಿಂದ ಅದೇ ಇರೋದು……"

# ಪ್ರಜಾಪ್ರಭುತ್ವ : ಇನ್ನೊಂದು ಮುಖ

— ಡುರ್ಗಾಸೀತ

---

ನಾವು ಪ್ರಜಾಪ್ರಭುತ್ವವಾದಿಗಳು. ಪ್ರಜಾಪ್ರಭುತ್ವಕ್ಕಿಂತ ಉತ್ತಮವಾದ ರಾಜಕೀಯ ವ್ಯವಸ್ಥೆ ಇನ್ನೊಂದಿಲ್ಲ. ಏಕೆಂದರೆ ನಾವು ಆ ವ್ಯವಸ್ಥೆಯನ್ನು ಒಪ್ಪಿ ಕೊಂಡಿದ್ದೇವೆ. ನಮ್ಮ ಟಿ.ವಿ.ಗಿಂತ ಉತ್ತಮವಾದ ಟಿ.ವಿ. ಇನ್ನೊಂದಿಲ್ಲ; ಏಕೆಂದರೆ ನಾವು ಅದನ್ನು ಕೊಂಡಿದ್ದೇವೆ. ನಾವು ಟಿ.ವಿ.ಯನ್ನು ಕೊಳ್ಳದೆ ಇದ್ದಲ್ಲಿ ಟಿವಿಯಂತಹ ನಿಷ್ಪ್ರಯೋಜಕ ವಸ್ತು ಇನ್ನೊಂದಿಲ್ಲ.

ಪ್ರಜಾಪ್ರಭುತ್ವದ ಮೇಲೆ ನಮಗೆ ಅಪಾರ ಆದರವಿದೆ. (ಅಲ್ಪ ಪ್ರಾಣಗಳನ್ನು ಮಹಾ ಪ್ರಾಣವಾಗಿ ಉಚ್ಚರಿಸಬಾರದೆಂದು ಸವಿನಯ ವಿನಂತಿ.)

ಆದರೆ ಕೆಲ ರಾಜನೀತಿ ಶಾಸ್ತ್ರಜ್ಞರು ಪ್ರಜಾಪ್ರಭುತ್ವ ಒಂದು ಆಡಳಿತ ವ್ಯವಸ್ಥೆಯೇ ಅಲ್ಲ ಎನ್ನುತ್ತಾರೆ. ಒಂದು ತತ್ವವನ್ನು ಜನ ಗಮನಿಸಿದ್ದಾರೆ: "ನಾಲುವರ ನಡುವಣ ಹಾವು ಸಾಯದು" ಎಂಬ ಗಾದೆಯ ಮಾತನ್ನು ನಾವು ಕೇಳಿದ್ದೇವೆ. ಹಾಗೆಯೇ ಪ್ರಜಾಪ್ರಭುತ್ವದಲ್ಲಿ ಅನಾಚಾರ ಭ್ರಷ್ಟಾಚಾರಗಳು ಕೊನೆಗೊಳ್ಳುವುದೇ ಇಲ್ಲ.

ಪ್ರಜಾಪ್ರಭುತ್ವದ ಒಂದು ಮುಖ್ಯ ಲಕ್ಷಣವೆಂದರೆ ಮತ ಗಳಿಸಲು ಸತತ ಯತ್ನ ಎಲ್ಲರಿಂದಲೂ ನಡೆಯುತ್ತದೆ. ಬರಿ ಮತ ಗಳಿಸುವುದೇ ಮುಖ್ಯವಲ್ಲ; ಸೀಟು ಗಳಿಸುವುದೇ ಮುಖ್ಯವಾಗುತ್ತದೆ. ಕಡಿಮೆ ಮತ, ಹೆಚ್ಚು ಸೀಟು ಬಂದವರದೇ ರಾಜ್ಯಾಡಳಿತವಾಗುತ್ತದೆ.

ಜನತೆಯ ಅಭಿಪ್ರಾಯಕ್ಕೆ ಬೆಲೆ ಸಿಗುವುದಿಲ್ಲ. ಹೇಗೆಂದರೆ, ಪ್ರತಿನಿಧಿಯ ಅಭಿಪ್ರಾಯವೇ ಜನತೆಯ ಅಭಿಪ್ರಾಯವೆಂದು ಕೆಲ ಕಾಲ ಒಪ್ಪಿಕೊಳ್ಳಲಾಗುತ್ತದೆ. ಪ್ರತಿನಿಧಿಯ ಅಭಿಪ್ರಾಯಕ್ಕೂ ಬೆಲೆ ಇಲ್ಲ. ಅವನು ಆಳುವ ಪಕ್ಷದಲ್ಲಿದ್ದರೆ ಮಂತ್ರಿ ಪದವಿಗೆ, ಮುಖ್ಯ ಮಂತ್ರಿ ಪದವಿಗೆ, ಪ್ರಧಾನಿ ಪಟ್ಟಕ್ಕೆ, ಛೇರ್ಮನ್ ಪಟ್ಟಕ್ಕೆ ಬಾಯಿ ಬಾಯಿ ಬಿಡುತ್ತಿರುತ್ತಾನೆ. ಅವನ ಸ್ವಂತ ಲಾಭ ಪ್ರಜೆಗಳ ಲಾಭವಾಗಲು ಹೇಗೆ ಸಾಧ್ಯ ?

ಇನ್ನು ಪಕ್ಷ ಪದ್ಧತಿಯ ಬಗ್ಗೆ ಹೇಳುವುದು ಬಲು ಕಷ್ಟ. ಚುನಾವಣೆಗಳಲ್ಲಿ ಗೆದ್ದ ಪಕ್ಷದವರು ಲಾಭ ಹಂಚಿಕೊಳ್ಳುವ ಪದ್ಧತಿ, ಅಮೆರಿಕ, ಇಂಗ್ಲೆಂಡುಗಳಿಂದ

ನಮ್ಮ ದೇಶಕ್ಕೆ ಬಂದಿದೆ. ಪ್ರಜಾಭಿಪ್ರಾಯಕ್ಕೆ ಜವಾಬ್ದಾರನಾಗುವ ಪದ್ಧತಿ ಬಂದಿದೆಯೇ ? ಟಾರ್ಚ್ ಬಿಟ್ಟು ಹುಡುಕಿ ನೋಡಿ, ಉತ್ತರವನ್ನು ನಿಮ್ಮ ಮನಸ್ಸಿನಲ್ಲೇ ಇಟ್ಟುಕೊಳ್ಳಿ.

ಪ್ರಜಾಪ್ರಭುತ್ವದಲ್ಲಿ ಯಾವ ಮೌಲ್ಯಗಳು ಏನಾಗುತ್ತವೆ ಎನ್ನುವುದನ್ನು ನೋಡೋಣ.

**ಸತ್ಯ :** ಸತ್ಯ ಎಂದರೇನು? ಯಾರಿಗೂ ಉತ್ತರ ಗೊತ್ತಿರದ, ಪೈಲೇಟನ ಪ್ರಶ್ನೆಯಲ್ಲಿ ಹೆಸರಿಸಿರುವ ಒಂದು ಮೌಲ್ಯ. ನುಡಿದಂತೆ ನಡೆಯುವುದು, ಸುಳ್ಳು ಹೇಳದಿರುವುದು, ಆಡಿದ ಮಾತನ್ನು, ನಿಲುವನ್ನು ಬದಲಿಸದಿರುವುದು ಸತ್ಯವಂತನ ಲಕ್ಷಣ. ನುಡಿದಂತೆ ನಡೆದರೆ ರಾಜಕೀಯದಲ್ಲಿ ಅಧಿಕಾರಕ್ಕೆ ತಕ್ಷಣ ತಪೆ. ವೈಕುಂಠ, ಕೈಲಾಸ ಸಿಕ್ಕರೇನು ಬಿಟ್ಟರೇನು? ಆದುದರಿಂದ ನಾಕಷ್ಟು ಬಹುಮತವಿದ್ದವರೆ, ಅವನು ಆಡಿದ್ದೇ ಸತ್ಯ. ತ್ರಿಕಾಲಗಳಲ್ಲೂ ಒಂದೇ ರೀತಿಯಲ್ಲಿದ್ದು ಬದಲಾಯಿಸದ್ದೇ ಸತ್ಯ ಎಂದಿಟ್ಟುಕೊಂಡರೆ ಅಧಿಕಾರಕ್ಕೆ ಕಚ್ಚಿಕೊಂಡಿರಲು ಅವಲಂಬಿಸುವ, ದಗಾಕೋರತನವೇ ಸತ್ಯವೆಂದು ಭಾವಿಸಬೇಕಾದೀತು.

**ನ್ಯಾಯ :**

ನ್ಯಾಯ ಎಲ್ಲಿದೆ ಎಂಬ ಪ್ರಶ್ನೆಗೆ ಅದೇ ಹೆಸರಿನ ಸಿನಿಮಾ ನೋಡಿದವರು ಕೊಟ್ಟ ಉತ್ತರಗಳನ್ನು ನೀವು ಕೇಳಿರುವಿರಾ? ಕಳೆದ ಚುನಾವಣೆಯಲ್ಲಿ ಮತವಿತ್ತು ಬಂದವನೊಬ್ಬನಿಗೆ 'ತಬ್ಬಲಿಯು ನೀನಾದೆ ಮಗನೆ' ಎಂದು ಅವನ ತಂದೆ ಹೇಳಿದನಂತೆ. ಬಲಾಚ ಪೃಥ್ವೀಬಲ್ಲಿದರು ಮಾಡಿದ್ದೇ, ಹೇಳಿದ್ದೇ ನ್ಯಾಯ. ಮೂಗು ಮುಟ್ಟುವವರೆಗೆ ಜ್ಞಾನ ದ್ರವವನ್ನು ಕುಡಿಸಿ, ಕೈ ತುಂಬಾ ರೊಕ್ಕ ಹಚ್ಚಿದವನು ಹೇಳಿದ್ದೇ ನ್ಯಾಯ.

ಅದೇಕೆ ಎಂದು ಕೇಳುತ್ತೀರಿ. ಉತ್ತರ ತಕ್ಷಣ ಕೊಡುತ್ತಾರೆ;

ಹೋದ ಚುನಾವಣೆಯಲ್ಲಿ ಒಂದು ಬಾಟಲಿ ಕೊಡಿಸಿದವನು ಮತ್ತೆ ಇದುವರೆಗೆ ಕಾಣಲಿಲ್ಲ. ಮಳೆ ಬರಲಿಲ್ಲ; ಕೂಲಿ ಸಿಗಲಿಲ್ಲ; ಕೊಟ್ಟ ಸಾಲದಲ್ಲಿ ಕೊಡಿಸಿದವನ ಕೈಯಿಂದ ಬರುವಷ್ಟೇಸಿಕ್ಕಿತು. ಏನು ಮಾಡೋಣ ? ಈಗ ಒಂದೆರಡು ತಿಂಗಳು, ಸಿಕ್ಕಷ್ಟೇ ಸಿದಬಸ್ಕ. ನ್ಯಾಯ? ಎಲ್ಲೈತೆ ? —ನ್ಯಾಗೆ ?

ಪರಿಸ್ಥಿತಿ ಅಷ್ಟೇನೂ ಕೆಟ್ಟಿಲ್ಲ. ಪ್ರಬಲ, ಪ್ರಾಮಾಣಿಕ ನ್ಯಾಯಾಂಗಗಳಿವೆ. ಪ್ರಾಮಾಣಿಕರಾದ ನ್ಯಾಯಮೂರ್ತಿಗಳಿದ್ದಾರೆ. ನ್ಯಾಯ ಬುದ್ಧಿ ನಮ್ಮಲ್ಲಂತೂ ಇನ್ನೂ ಪ್ರಬಲವಾಗಿಯೇ ಇದೆ. ಆದರೆ ನ್ಯಾಯ ನಿರೂಪಕ ಶಾಸನಗಳನ್ನು ತಿದ್ದಿಕೊಳ್ಳುವ ಶಾಸಕಾಂಗಗಳು ಬೇರೆ ಇವೆ. ಅಲ್ಲಿ ರಾಜಕೀಯಸ್ಥರೇ ಇರುತ್ತಾರೆ.

**ಸುಳ್ಳು :**

ಪ್ರಜಾಪ್ರಭುತ್ವದಲ್ಲಿ ಉಳಿದುಕೊಳ್ಳಲು ಈ ಮೌಲ್ಯ ಅತ್ಯಗತ್ಯವಾದರೂ, ಸುಳ್ಳು ಹೇಳಿರುವೆನೆಂದು ಒಪ್ಪಿಕೊಳ್ಳದಿದ್ದರಾಯಿತು. ಸುಳ್ಳು ಎಂದರೆ ಏನು ? ಸತ್ಯವೆಂದರೇನು ಎಂದು ತಿಳಿಯದೆ ಸುಳ್ಳೆಂದರೇನು ತಿಳಿಯುವುದಿಲ್ಲ. ಈ ಮೌಲ್ಯದ ಆಧಾರದ ಮೇಲೆ ಸತ್ಯವು ಒಂದು ಸಾಪೇಕ್ಷ ಮೌಲ್ಯವೆಂದೂ ಸಿದ್ಧಪಡಿಸಲಾಗುತ್ತದೆ.

**ಚುನಾವಣೆಗಳು :**

ಇದು ಪ್ರಜಾಪ್ರಭುತ್ವದ ಪರಮಮೌಲ್ಯ. ಇದರಲ್ಲಿ ಗೆಲ್ಲುವುದೇ ರಾಜಕಾರಣಿಗಳ ಪರಮ ಧ್ಯೇಯ.

ಸಮಸ್ತ ಶಾಶ್ವತ ಮೌಲ್ಯಗಳನ್ನು ನುಂಗುವ ಕೊಳಚೆಯ ಗುಂಡಿಯೇ ಚುನಾವಣೆ.

ಇದಕ್ಕಾಗಿ ಒಂದು ಪಟ್ಟಿ ತಯಾರಾಗುತ್ತದೆ. ಅದರಲ್ಲಿ ಇದ್ದವರು, ಇಲ್ಲದವರು ಎಲ್ಲರೂ ಸೇರಿರುತ್ತಾರೆ. ಸ್ಟಾಟ್ಯೂಟರಿ ಸ್ಯಾಂಕ್ಟಿಟಿ ಇರುವುದರಿಂದ ಇದನ್ನು ಪ್ರಶ್ನಿಸುವಂತಿಲ್ಲ. ಆ ಪಟ್ಟಿಯಲ್ಲಿದ್ದವರು ರಾಷ್ಟ್ರಪತಿ, ಪ್ರಧಾನಿಗಳೇ ಆಗಲಿ, ದಾರ್ಶನಿಕರು ಜಗದ್ಗುರುಗಳಾಗಲೀ ಲೋಕಲ್ ಈಡಿಯಟ್ಟುಗಳಾಗಲೀ ಅವರಿಗೆ ಒಂದೇ ಮತ, ಆ ಮತದ ಬೆಲೆ—ಒಂದು. ಚುನಾವಣಾ ವೆಚ್ಚಕ್ಕೆ ಒಂದು ನಾಮ್ಕಾವಾಸ್ತೆ ಮಿತಿಯಿರುತ್ತದೆ. ಮಿತಿಯಿದ್ದುದಕ್ಕೆ ಚುನಾವಣೆಯಲ್ಲಿ ಬೆಲೆಯಿರುವುದಿಲ್ಲ.

ಚುನಾವಣೆಗಾಗಿ ಪಾರ್ಟಿ ಫಂಡ್ಸ್ ಎಂದಿರುತ್ತವೆ. ಇದಕ್ಕೆ ಕಿಕ್‌ಬ್ಯಾಕ್‌ಗಳಿಂದ ಹಣ ಜಮಾವಣೆಯಾಗುತ್ತದೆ. ಚುನಾವಣೆಯಲ್ಲಿ ಗೆದ್ದರಾಯಿತು, ಏನು ಬೇಕಿದ್ದರೂ ಮಾಡಬಹುದಾದುದರಿಂದ, ಚುನಾವಣೆಯಿಲ್ಲದ ಕಾಲದಲ್ಲೆಲ್ಲಾ ಕಿಕ್‌ಬ್ಯಾಕ್‌ಗಳ ಸಂಗ್ರಹವಾಗುತ್ತದೆ. ಇದರಿಂದ ಕೆಲವು ಪುರಾತನ ತತ್ವಗಳಿಗೆ ಚಲಾವಣೆ ಬಂದಿದೆ, ಅದು ಯಾವುವೆಂದರೆ: ಭಂಡತನ, ಹೊಣೆಗೇಡಿತನ, ಭ್ರಷ್ಟಾಚಾರ, ಇತ್ಯಾದಿ, ಇವುಗಳ ದೆಸೆಯಿಂದ ವರಿಷ್ಠರಿಂದ ಕನಿಷ್ಠರವರೆಗೆ ಎಲ್ಲರೂ ರೊಕ್ಕ ಕಮಾಯಿಸಲು ಓಡಾಡಲಾರಂಭಿಸುತ್ತಾರೆ.

ಇದು ಮನುಷ್ಯರ ಮೂಲಭೂತ ಗುಣಗಳ ಪ್ರಾಬಲ್ಯಕ್ಕೆಡೆ ಮಾಡಿಕೊಡುತ್ತದೆ. ಅದಾವುದೆಂದರೆ ಸತ್ಯದಿಂದ ಅಸತ್ಯ, ಮಾನಧನತೆಯಿಂದ ನಾಚಿಕೆಗೇಡು, ಪ್ರಾಮಾಣಿಕತೆಯಿಂದ ಮೋಸ, ಧರ್ಮದಿಂದ ಅಧರ್ಮ.

ಇದರಿಂದಾಗಿಯೇ ಪ್ರಜಾಪ್ರಭುತ್ವಕ್ಕೆ ಬಹು ಜನರ ಬೆಂಬಲ ಸಿಗುತ್ತದೆ.

**ಮಾನವೀಯತೆ :**

ಪ್ರಜಾಪ್ರಭುತ್ವದಲ್ಲಿ ಕೆಲವು ಮಾನವೀಯ ಮೂಲಭೂತ ಹಕ್ಕುಗಳಿಗೆ ರಕ್ಷಣೆ ದೊರೆಯುವುದೆಂದು ಹೇಳಲಾಗಿದೆ.

1. ಬದುಕುವ ಹಕ್ಕು (ಭಯೋತ್ಪಾದಕರ ಗುಂಡಿಗೆ, ಪರಿಸರ ಮಾಲಿನ್ಯಕ್ಕೆ, ಕಳ್ಳ ಬಟ್ಟಿ ಸರಾಯಿಗೆ ಬಲಿಯಾಗದಿದ್ದಾಗ).
2. ಉದ್ಯೋಗದ ಹಕ್ಕು (ಕೆಲಸ ಸಿಕ್ಕರೆ).
3. ವಾಕ್ ಸ್ವಾತಂತ್ರ್ಯ (Freedom to bark).
4. ಅಭಿವ್ಯಕ್ತಿ ಸ್ವಾತಂತ್ರ್ಯ.

ಇದೊಂದು ಸಂಕೀರ್ಣ ಆವಿಷ್ಕಾರ. ಅಶ್ಲೀಲತೆಯೇ ಇದರ ಬುನಾದಿ; ಇದನ್ನು ಕಲಾತ್ಮಕ ಜರೂರಂತಿ ಎಂದರಾಯಿತು. ಚಿತ್ರವಾಗಲೀ, ಸಾಹಿತ್ಯ ಕೃತಿಯಾಗಲೀ, ಸಿನಿಮಾವಾಗಲೀ ಕೆಟ್ಟದಾಗಿದ್ದರೂ ಕಲಾತ್ಮಕ ಎಂದರೆ ಅದಕ್ಕೆ ಪ್ರಜಾಪ್ರಭುತ್ವದಲ್ಲಿ ಮನ್ನಣೆ, ಸಬ್ಸಿಡಿ, ಬಹುಮಾನ.

5. ಆಯ್ಕೆಯ ಸ್ವಾತಂತ್ರ್ಯ.

ಒಂದು ಸಗಣಿಯ ತೊಪ್ಪೆಯಲ್ಲಿ ಎರಡು ಅಥವಾ ಹಲವು ಭಾಗ ಮಾಡಿ, ಅದರಲ್ಲೊಂದನ್ನು ಆಯ್ದುಕೊಳ್ಳುವ ಸ್ವಾತಂತ್ರ್ಯ.

6. ಸಮಾನತೆ :

ಪ್ರಜಾಪ್ರಭುತ್ವದಲ್ಲಿ ಸಂಪೂರ್ಣ ನಂಬಿಕೆ ಇರುವವರಿಗೂ, ಪ್ರಜಾಪ್ರಭುತ್ವದ ಬದ್ಧ ವೈರಿಗಳಿಗೂ ಒಂದೇ ವಿಧವಾದ ಸವಲತ್ತನ್ನು ಪ್ರಜಾಪ್ರಭುತ್ವವು ಒದಗಿಸಿ ಕೊಡುತ್ತದೆ.

**ಉಪಸಂಹಾರ**

ಎಲ್ಲ ಮಾನುಷ ಆವಿಷ್ಕಾರಗಳಲ್ಲಿರುವಂತೆ ಪ್ರಜಾಪ್ರಭುತ್ವದಲ್ಲಿ ತಾತ್ವಿಕ ರಾಜಕೀಯ ಮತ್ತು ರಿಯಲ್ ಪಾಲಿಟಿಕ್ ಎಂಬ ಎರಡು ಭಾಗಗಳಿವೆ.

ರಾಜಕೀಯಂದಲ್ಲಿರದ ನಮ್ಮ ನಿಮ್ಮಂತಹವರಿಗೆ ಈ ಸಂಕೀರ್ಣತೆ ಅರ್ಥವಾಗುವುದಿಲ್ಲ.

ನಿರಂಕುಶ ಅಧಿಕಾರದಲ್ಲಿರುವಂತೆ ಇಲ್ಲಿ ಎಲ್ಲರೂ ತಮ್ಮ ಮೆದುಳನ್ನು ಒಬ್ಬನಿಗೇ ಅರ್ಪಿಸಬೇಕಾಗಿಲ್ಲ. ಗಲ್ಲಿಯ, ಬೀದಿಯ, ಊರಿನ, ಜಿಲ್ಲೆಯ, ರಾಜ್ಯದ, ರಾಷ್ಟ್ರದ ಹಲವು ಮಂದಿಗಳಲ್ಲಿ ತಮಗೆ ಲಾಭ ಬರುವಂತೆ ಮೆದುಳು ಮಾರಿ, ಊಸರವಳ್ಳಿಯಾಗಿ ಜೀವಿಸಬೇಕಾಗಿ ಬರುತ್ತದೆ. ಬದುಕಿರುವುದೇ ಒಂದು ಸಂತಸ. ಆದುದರಿಂದ ಪ್ರಜಾಪ್ರಭುತ್ವವು ವಿಚಾರಪರರೆಲ್ಲರ ಆಯ್ಕೆ.

ಡಾರ್ವಿನ್ನನ ಸ್ಟ್ರಗಲ್ ಫಾರ್ ಎಕ್ಸಿಸ್ಟೆನ್ಸ್, ಸರ್ವೈವಲ್ ಆಫ್ ದಿ ಫಿಟ್ಟೆಸ್ಟ್ ಎಂಬ ಕಾಲ್ಪನಿಕ ಸಿದ್ಧಾಂತವನ್ನು, ಮನುಷ್ಯ ಜೀವನಕ್ಕೆ ಬಲವಂತದಿಂದ ಅನ್ವಯಿಸಲೆಂದೇ ಪ್ರಜಾಪ್ರಭುತ್ವ ಬಂತು.

ಈ ಕಾಲದಲ್ಲಿ ವೈಜ್ಞಾನಿಕ ದೃಷ್ಟಿಕೋನವನ್ನು ಅಲ್ಲಗಳೆಯಲು ಸಾಧ್ಯವೇ? !



''Emmission ಟೆಸ್ಟು ಬರೀ ವಾಹನಗಳಿಗೆ ಮಾತ್ರ ಅಲ್ಲ, ಚಾಲಕರಿಗೂ ಅನ್ವಯಿಸತ್ತೆ ಅಂದ್ರಲ್ಲಾ....ಹಾಗೆಂದ್ರೇನ್ ಸಾರ್?''

# ಕುರೂಪ ರಾಜಕಾರಣಿ

**—ಆರ್.ಕೆ. ಲಕ್ಷ್ಮಣ್**

ನಮ್ಮ ದೇಶದ ಪರಿಸ್ಥಿತಿ ಎಷ್ಟು ಹಾಸ್ಯಾಸ್ಪದ ಮಟ್ಟ ತಲುಪುತ್ತಿದೆಯೆಂದರೆ, ವ್ಯಂಗ್ಯಚಿತ್ರಕ್ಕೂ, ಚಿತ್ರಿತನಿಗೂ ಇರಬಹುದಾದ ವ್ಯತ್ಯಾಸ ಕ್ರಮೇಣ ಅದೃಶ್ಯವಾಗುತ್ತಿದೆ. ರಾಜಕಾರಣಿಗಳ ನಡೆ, ನುಡಿ, ಪ್ರವರ್ತನೆಗಳನ್ನು ನೋಡಿದಾಗ ಅವರೆಲ್ಲ ನಿರಂತರವಾಗಿ ವ್ಯಂಗ್ಯಚಿತ್ರಕಾರನ ಮುಂದಿನ ಕಾರ್ಟೂನ್‌ಗಾಗಿ ಪೋಸ್ ಕೊಡುತ್ತಿರುವಂತೆನ್ನಿಸುತ್ತದೆ. ಯಾರಿಗೆ ಗೊತ್ತು-ವ್ಯಂಗ್ಯಚಿತ್ರಗಳೂ ರಾಜಕಾರಣಿಗಳ ಮೇಲೆ ಅತಿಯಾದ ಅಗೋಚರ ಪ್ರಭಾವ ಬೀರಿ, ಕಡೆಗೆ ಮೂರು ಆಯಾಮದ ವ್ಯಂಗ್ಯಚಿತ್ರಗಳೇ ನಿಜ ಜೀವನದಲ್ಲಿ ರಾಜಕಾರಣಿಗಳ ರೂಪದಲ್ಲಿ ಓಡಾಡುತ್ತಿರಬಹುದು.

ನನ್ನ ಕೆಲಸದ ಬಗ್ಗೆ ಆಸಕ್ತಿ ವಹಿಸುವ ಜನ, ಸಾಮಾನ್ಯವಾಗಿ ಕೇಳುವ ಪ್ರಶ್ನೆ ಎಂದರೆ, ನನ್ನ ವ್ಯಂಗ್ಯಚಿತ್ರಗಳಿಗೆ ವಸ್ತು ಎಲ್ಲಿಂದ ಸಿಗುತ್ತದೆಂಬುದು. ನಾನು ಆಗಾಗ 'ರಾಜಕಾರಣಿಗಳು ಆ ಕೆಲಸ ಮಾಡುತ್ತಾರೆ'ಂಬ ಲಘುವಾದ ಉತ್ತರ ಕೊಡುವುದುಂಟು.

ರಾಜಕಾರಣಿ ಎಂದಾಕ್ಷಣಕ್ಕೆ ನಮ್ಮ ಮನಸ್ಸಿಗೆ ಬರುವುದು, ಒಂದು ವಿಚಿತ್ರ ಚಿತ್ರ. ರಾಜಕಾರಣಿಯೊಬ್ಬ ತನ್ನ ಬಗ್ಗೆ ತಾನೇ ಇರಿಸಿಕೊಂಡಿರುವ ಭ್ರಮೆಗಳಾದ ಬುದ್ಧಿಜೀವಿ, ಗೌರವಾನ್ವಿತ, ಸಮರ್ಪಿತ ವ್ಯಕ್ತಿಯ ಚಿತ್ರಕ್ಕೆ ಸಂಪೂರ್ಣ ವಿರುದ್ಧ ಅಭಿಪ್ರಾಯ ನಮ್ಮಲ್ಲಿ ಮೂಡುತ್ತದೆ. ನಮ್ಮ ಮನಸ್ಸಿಗೆ ಕೂಡಲೇ ಹೊಳೆವ ಚಿತ್ರವೆಂದರೆ, ಹುಂಬತನದಿಂದ, ಕೂಡಿದ, ವ್ಯಂಗ್ಯಚಿತ್ರಕ್ಕೆ ತುಂಬಾ ಹತ್ತಿರ ಇರುವ ಹಾಸ್ಯಾಸ್ಪದ ವ್ಯಕ್ತಿಯದು.

ರಾಜಕಾರಣಿಯೊಬ್ಬ ಸ್ವಲ್ಪ ಯಶಸ್ವಿಯಾಗಿ, ಕಡೆಗೆ ಮಂತ್ರಿಯೂ ಆಗಿಬಿಟ್ಟರೆ, ಮೇಲಿನ ಲಕ್ಷಣಗಳೆಲ್ಲಾ ವಿಸ್ತೃತಗೊಳ್ಳುತ್ತವೆ. ಅವನು ತನ್ನ ಪಾತ್ರ ನಿರ್ವಹಣೆಯಲ್ಲಿ ವ್ಯಂಗ್ಯಚಿತ್ರಗಾರನಿಗೆ ಅನಿಯಮಿತ ಕೆಲಸ ಕೊಡಲು ಬೆವರು ಸುರಿಸಿ ದುಡಿಯುತ್ತಾನೆ. ಅಷ್ಟೇನೂ ಯಶಸ್ವಿಯಾಗದ ರಾಜಕಾರಣಿಗಳ ಮಂತ್ರಿಗಳ ಮನೆ, ಕಾರ್ಯಾಲಯದೆದುರು, ಪ್ರದರ್ಶನ ಏರ್ಪಡಿಸುತ್ತ, ಅಧಿಕಾರದಲ್ಲಿರುವ ಜನರ ಪ್ರತಿಕೃತಿಗಳನ್ನು ಸುಡುತ್ತಾ ಅನಿರ್ದಿಷ್ಟ ಕಾಲದ ಉಪವಾಸಗಳಲ್ಲಿ ಪಾಲ್ಗೊಳ್ಳುತ್ತಾ, (ಕೆಲ ದಿನಗಳಲ್ಲೇ ಈ ಅನಿರ್ದಿಷ್ಟ ಕಾಲ ಮುಗಿದು ಹೋಗುವುದು ದುರಂತ) ಅಸಹಾಯಕ, ಅಮಾಯಕ ಜನರನ್ನು ಘೇರಾವ್ ಮಾಡುತ್ತಾ, ತಮ್ಮನ್ನು ತಾವು ರಾಜಕಾರಣದಲ್ಲಿ ತೊಡಗಿಸಿಕೊಂಡಿರುತ್ತಾರೆ.

ಈ ಎಲ್ಲವನ್ನೂ ವ್ಯವಸ್ಥೆಯಲ್ಲಿನ ದುಳುಕುಗಳನ್ನು ಹೊರಗೆಳೆಯಲು. ಜನಸಾಮಾನ್ಯರಿಗೆ ನ್ಯಾಯ ಒದಗಿಸಲು ಮಾಡಲಾಗುತ್ತದೆ! ಇದರ ಜತೆಗೆ ರಾಜಕಾರಣಿಗಳು ಹಣದುಬ್ಬರ ತಡೆಗಟ್ಟುವಲ್ಲಿ ಅತ್ಯವಶ್ಯ ವಸ್ತುಗಳ ಕೊರತೆ ನೀಗಿಸುವುದರಲ್ಲಿ, ರಾಜ್ಯದ ಗಡಿಗಳನ್ನು ತಪ್ಪಾಗಿ ಗುರುತಿಸಿದ್ದರೆ ಅದನ್ನು ಸರಿಪಡಿಸುವಲ್ಲಿ ಎಲ್ಲದರಲ್ಲೂ ಪರಿಣಿತರಾಗಿರುತ್ತಾರೆ. ಈ ಎಲ್ಲ ಚಟುವಟಿಕೆಗಳೂ ರೇಲ್ವೇ ಬೋಗಿಗಳನ್ನು ನುಚ್ಚುನೂರು ಮಾಡುವ, ಬಸ್‌ಗಳನ್ನು ಬೂದಿಯಾಗಿಸುವ, ಬಂದ್ ನಿಯೋಜಿಸುವ, ಹೋಟೆಲುಗಳಿಗೆ ಕಲ್ಲು ತೂರುವ ಅಂಶಗಳನ್ನೂ ಒಳಗೊಂಡಿರುತ್ತವೆ. ಇವೆಲ್ಲವೂ ಸಾಫಲ್ಯ ದೊರೆಯದ ಚಡಪಡಿಕೆಯ ಪರಮಾವಧಿಯಿಂದ ಮೂಡಿ ಬಂದದ್ದೆಂದು ನಮಗೆ ಅನುಮಾನ ಬರಬಹುದು. ಆದರೆ ಅದು ಸತ್ಯ ದೂರ; ಇವೆಲ್ಲವನ್ನೂ ಪ್ರಜಾಪ್ರಭುತ್ವದ ಮುಖ್ಯ ಲಕ್ಷಣಗಳೆಂದು ಅವರು ಕರೆಯುತ್ತಾರೆ.

ಸಂಸ್ಥಾಗತ ಶಕ್ತಿಗಳಿಗೆ ವಿರೋಧ ವ್ಯಕ್ತಪಡಿಸುವ ಈ ಎಲ್ಲ ಚಲುವಟಿಕೆಗಳೂ ಬಹಿರಂಗವಾಗಿಯೇ ನಡೆಯಬೇಕಾಗಿದೆಯಾದ್ದರಿಂದ, ಇದು ಸಾಕಷ್ಟು ಆಯಾಸ ಉಂಟುಮಾಡುವ ಕಾಯಕವೂ ಆಗುತ್ತದೆ, ಅದರಲ್ಲೂ ರಾಜಕಾರಣಿಯ ಉತ್ಸಾಹ ಮತ್ತು ವಯಸ್ಸು ಇಂಥ ಕಷ್ಟದ ಕಾಯಕಕ್ಕೆ ಒಗ್ಗುವುದಿಲ್ಲವಾದರೆ, ಇನ್ನೂ ತೊಂದರೆ. ಹೀಗಾದಾಗ ಆಳುವ ಪಕ್ಷ ಒಡ್ಡುವ ಆಮಿಷಕ್ಕೆ ಒಳಗಾಗಿ ಆ ಬದಿಗೆ ವಾಲಬೇಕೆಂಬ ಆಸೆಯೂ ಬಲವಾಗುತ್ತಲೇ ಹೋಗುತ್ತದೆ;ಹೀಗೆ ಪಕ್ಷಾಂತರ ಮಾಡುವ ವ್ಯಕ್ತಿಯನ್ನು ತೆರೆದ ಬಾಹುಗಳಿಂದ ಆಹ್ವಾನಿಸಿ ಮಂತ್ರಿಮಂಡಲದಲ್ಲಿ ಒಂದು ಸ್ಥಾನ ನೀಡುವ ಸಾಧ್ಯತೆಗಳೂ ಸಾಕಷ್ಟಿವೆ. ಅಲ್ಲಿ ಬಡತನ,ದುಃಖ,ದುಮ್ಮಾನಗಳನ್ನು ನೀಗಿಸುವ ಕಷ್ಟದ ಕಾಯಕವನ್ನು ಹವಾ ನಿಯಂತ್ರಿತ ವಾತಾವರಣದಲ್ಲಿ, ಬಿಸಿಲಲ್ಲಿ ಬೇಯದೇ,ಮಳೆಯಲ್ಲಿ ನೆನೆಯದೇ, ಆರಾಮವಾಗಿ ಮೆತ್ತನೆಯ ಮೆತ್ತೆಯ ಮೇಲೆ ಕುಳಿತು ಮಾಡಬಹುದು,

ಆದರೆ, ಎಲ್ಲ ಪಕ್ಷಾಂತರಗಳೂ ಮಂತ್ರಿ ಪದವಿಯಲ್ಲಿ ಪರ್ಯಾವಸಾನಗೊಳ್ಳುತ್ತವೆಂದು ನಂಬುವುದಸಾಧ್ಯ. ಜಾತಿ, ಪ್ರಾಂತ್ಯ ಗುಂಪುಗಾರಿಕೆ,ಕೊಡುವ ಪ್ರಾಮುಖ್ಯತೆ ಹಾಗೂ ಸ್ವರ ಸ್ವಜನ ಪಕ್ಷಪಾತದಂತಹ ಅಗೋಚರ ಶಕ್ತಿಗಳು ಅಮಾಯಕ ಪಕ್ಷಾಂತರಿಯೊಬ್ಬ ಮಂತ್ರಿಪದವಿಯನ್ನಾರ್ಜಿಸುವುದಕ್ಕೆ ಅಡ್ಡಗೋಡೆಗಳಾಗಿ ನಿಲ್ಲಬಹದು. ಹಾಗೇನಾದರೂ ಆದರೆ ಆ ವ್ಯಕ್ತಿ ಎಡ ಬದಿಯಿಂದ ಅಥವ ಬಲದಿಂದ ಪೂರ್ಣ ಹಿಂದೆ ತಿರುಗಿ ಸರಕಾರವನ್ನುರುಳಿಸುವ ಕೆಲಸಕ್ಕೆ ಭಕ್ತಿಯಿಂದ ತೊಡಗುತ್ತಾನೆ. ಮುಂದಿನ ಸರಕಾರ ತನ್ನ ನಾಯಕತ್ವದಲ್ಲೇ ರೂಪುಗೊಳುತ್ತದೆಂಬ ಕನಸೂ ಅವನಿಗಿರುತ್ತದೆ. ಅನೇಕ ಬಾರಿ ಈ ತಂತ್ರವೂ ಫಲಿಸಿ, ಇನ್ನಾರಾದರೂ ಅವನನ್ನುರುಳಿಸುವವರೆಗೂ ಅಧಿಕಾರದ ಫಲವನ್ನನುಭವಿಸುತ್ತಾ ಮುಂದುವರೆಯುತ್ತಾನೆ. ದಿನೇ ದಿನೇ ಅಧಿಕಾರ ಕಳೆದುಕೊಳ್ಳುವುದು ತುಸು ತೊಂದರೆಯ ವಿಷಯವಾದ್ದರಿಂದ, ಆ ಸಾಧ್ಯತೆಯತ್ತ ಪ್ರಯತ್ನ ನಡೆಸಬಹುದಾದ ಭಾವೀ ಕುಟಿಲೋಪಾಯಿಯನ್ನೂ ಅಧಿಕಾರ ವರ್ಗಕ್ಕೆ,

ಸೇರಿಸಿಕೊಂಡು ನಯವಾಗಿ ಅವನ ಬಾಯಿ ಮುಚ್ಚಿಸುವುದೇ ಉತ್ತಮ ಉಪಾಯ. ಅದರಿಂದು ಅನೇಕ ಬಾರಿ ಮುಳುಗುತ್ತಿರುವ ದೋಣಿಯನ್ನುಳಿಸಲು ಸಮುದ್ರವನ್ನೇ ನುಂಗಿದ ಬಾಬ್ತಿನದಾಗುತ್ತದೆ.

ಸ್ವಲ್ಪ ಯೋಚಿಸಿ ನೋಡಿದರೆ ನಮ್ಮ ದೇಶದಲ್ಲಿ ವಿರೋಧ ಪಕ್ಷ ಎನ್ನುವುದ ಇಲ್ಲವೇ ಇಲ್ಲ! ನಮ್ಮ ದೇಶದ್ದು 'ಉತ್ತಮ ಪ್ರಜಾಪ್ರಭುತ್ವ' ಎಂಬ ಢೋಂಗಿಯನ್ನು ಪ್ರಪಂಚದೆದುರು ಪ್ರದರ್ಶಿಸಲು ಮಾತ್ರ 'ವಿರೋಧ ಪಕ್ಷವನ್ನು' ಇನ್ನೂ ಭದ್ರವಾಗಿ ಪೋಷಿಸಿರುವಂತೆ ತೋರುತ್ತದೆ. ಈ ಕಾರಣಕ್ಕಾಗಿಯೇ ಅಧಿಕಾರದಲ್ಲಿರುವ ಜನರ ಬಗ್ಗೆ ಗಮನ ಕೇಂದ್ರೀಕರಿಸುವುದು ನನಗೆ ಖುಷಿಯ ವಿಷಯ. ಅವರ ಎಲ್ಲ ಚಟುವಟಿಕೆಗಳೂ ಬಹಿರಂಗಗೊಳುತ್ತವೆ, ಜೊತೆಗೆ ಅವರು ಸದಾ ಜನರ ದೃಷ್ಟಿಗೆ ದಕ್ಕುತ್ತಾ ಜೀವಂತವಾಗಿರುತ್ತಾರೆ. ದೇಶದ ಅಸ್ತಿತ್ವದ ವಿಷಯದಂತಹ ಗಂಭೀರ ವಿಷಯಗಳ ಬಗ್ಗೆ ವಿಚಿತ್ರವೆನಿಸುವ ತಪ್ಪು ನಿರ್ಧಾರಗಳನ್ನು ಕೈಗೊಂಡು,ನಂಬಲಾಗದ ಮೂರ್ಖತನ ವನ್ನೂ ತೋರ್ಪಡಿಸಿ, ನಿರಂತರವಾಗಿ ವಿವಾದಗಳಲ್ಲಿ ಸಿಲುಕಿ, ಎಲ್ಲದರಿಂದಲೂ, ಏನೂ ಆಗದವರಂತೆ ಹೊರಪುಟಿದು ಬರುತ್ತಾರೆ ! ಅವರ ಈ ವೈಚಿತ್ರ್ಯಗಳನ್ನು ಲೇವಡಿ ಮಾಡಿ, ಅವರ ಆಷಾಢಭೂತಿತನವನ್ನು ಎತ್ತಿ ತೋರಿ, ಹುಂಬತನಕ್ಕೆ ಗುಂಡುಸೂಜಿ ಚುಚ್ಚಿದರೆ, ಜನರಿಗೆ ಅದರಿಂದ ಬಹಳ ಸಹಜವೆನಿಸುವ ವಿಕೃತಾನಂದ ಉಂಟಾಗುತ್ತದೆ.

ನಮಗೆ ಸ್ವಾತಂತ್ರ್ಯ ಬಂದ ಹೊಸತರಲ್ಲಿ, ಎಲ್ಲರ ಹಾಗೆಯೇ ನಾನೂ ಭವಿಷ್ಯದ ಬಗ್ಗೆ ತುಂಬಾ ಭರವಸೆ ಇರಿಸಿಕೊಂಡಿದ್ದೆ. ವಿದೇಶಿ ಆಳ್ವಿಕೆಯ ಮೇಲೆ ಸತತ ದಾಳಿ ಮಾಡಿ, ಕಡೆಗೂ ಅವರ ಮನೆಮಠ ಖಾಲಿ ಮಾಡಿಸಿ, ಸಾಮಾನುಗಳನ್ನು ಕಟ್ಟಿಸಿದಾಗ ನನಗೆ ಕಂಡದ್ದು, ಸಾಮಾಜಿಕ ಅನ್ಯಾಯ, ಆರ್ಥಿಕ ಅಸಮಾನತೆ, ಪೋಲಿಸ್ ದೌರ್ಜನ್ಯ ಮತ್ತು ಹಿಂಸಾವಾದಗಳಿಂದ ಬಿಡುಗಡೆ. ಆಡಳಿತ ಸೂತ್ರ ಹಿಡಿದು ನಿಂತಿರುವ ನಮ್ಮ ಜನರನ್ನು ಅರ್ಥಮಾಡಿಕೊಂಡು, ಗೌರವದಿಂದ ಕಾಣಬೇಕೆಂದು ನಾನು ನಿರ್ಧರಿಸಿದ. ದೇಶ ನಿರ್ಮಾಣದ ಅವರ ಚಟುವಟಿಕೆಗಳನ್ನು ಅಭಿಮಾನದಿಂದ ಗಮನಿಸುತ್ತಾ ಅವರಿಗೆ ಸಹಾಯ ಮಾಡಲು ನಾನೂ ಕುಂಚ ಹಿಡಿದು ಕುಳಿತೆ.

ಆಗ ನಾನಿನ್ನೂ ಯುವಕ. ಸಹಜವೆಂಬಂತೆ ನೆಹರೂ ನನಗೆ ಹೀರೋ. ಅವರ ಚಿತ್ರ ಬರೆವಾಗ ಎಷ್ಟು ಜಾಗರೂಕನಾಗಿಬಿಡುತ್ತಿದ್ದೆನೆಂದರೆ, ವ್ಯಂಗ್ಯ ಭಾವಚಿತ್ರ ಕಲೆಯ ಆತ್ಮಸ್ವರೂಪವಾದ 'ವ್ಯಂಗ್ಯ' ದಂಶವನ್ನೇ ತ್ಯಾಗ ಮಾಡುವಷ್ಟರ ಮಟ್ಟಿಗೆ ಎಚ್ಚರಿಕೆಯಿಂದಿರುತ್ತಿದ್ದೆ. ನೆಹರೂ ಕೆಳತುಟಿಗಳು ಅತಿಯಾಗಿ ಹೊರಪುಟಿಯದಂತೆ, ಎಚ್ಚರವಹಿಸಿದ್ದಲ್ಲದೇ, ವ್ಯಕ್ತಿತ್ವಕ್ಕೆ ಒಂದು ಎತ್ತರದ ಗತ್ತು, ಮತ್ತು ತಲೆಯ ಮೇಲಿನ ಟೋಪಿ ಒಂದು ವಿಶಿಷ್ಟ ಕೋನದಲ್ಲಿ ವಾಲಿರುವಂತೆ ಚಿತ್ರಿಸಿ, ಕಾಮಿಕ್

ಖ್ಯಾತಿಯು ಕ್ಯಾಪ್ಟನ್ ಮಾರ್ವೆಲ್ ಮತ್ತು ಸೂಪರ್‌ಮ್ಯಾನ್‌ನ ಮಿತ್ರಣದಂತೆ ಕಂಡು ಬರುವ ಹಾಗೆ ಮಾಡುವಲ್ಲಿ ಸಾಕಷ್ಟು ಸಫಲನೂ ಆದೆ. ಹೀಗೆ ನೆಹರೂ ಅವರನ್ನು ಬೃಹದಾಕಾರದಲ್ಲಿ ಎದ್ದು ನಿಂತಿದ್ದ ಆರ್ಥಿಕ, ಸಾಮಾಜಿಕ, ರಾಜಕೀಯ ಮತ್ತು ಭಾಷಾ ಸಮಸ್ಯೆಗಳನ್ನೆದುರಿಸಲು ಸನ್ನದ್ಧರನ್ನಾಗಿಸಿದೆ. ಇದೆಲ್ಲಾ ಕೆಲ ತಿಂಗಳುಗಳ ಮಟ್ಟಿಗೆ ಮುಂದುವರೆಯಿತು.

ಆದರೆ ಕ್ರಮಕ್ರಮೇಣ ನನ್ನಲ್ಲಿನ ವ್ಯಂಗ್ಯಮೂರ್ತಿ ಚಡಪಡಿಸಲಾರಂಭಿಸಿದ. ಪತ್ರಿಕೆಯಲ್ಲಿ ಬರುತ್ತಿದ್ದ ದೊಡ್ಡ ಶೀರ್ಷಿಕೆಗಳು, ಅದೇ ಪತ್ರಿಕೆಯಲ್ಲಿ ಅಚ್ಚಾದ ನನ್ನ ವ್ಯಂಗ್ಯಚಿತ್ರಗಳಿಂದ ಸಂಪೂರ್ಣ ಭಿನ್ನ ಪ್ರತಿಕ್ರಿಯೆಯನ್ನು ನಿರೀಕ್ಷಿಸುತ್ತಿದ್ದವು. ದೇಶೋದ್ಧಾರಕರನ್ನಾಗಿ ಚಿತ್ರಿಸಿದ ನನ್ನ ನೆಹರೂ ಚಿತ್ರಣಕ್ಕೂ, ಅವರ ಮಾತು, ನೀತಿ, ಯೋಜನೆಗಳಿಗೂ ತಾಳೆ ಇಲ್ಲದಂತಾಯಿತು. ನಾನಾಗಿಯೇ ರಮಿಸಿ, ಎತ್ತಿಹಿಡಿದ ನೆಹರೂ ಅವರ ವ್ಯಕ್ತಿತ್ವವನ್ನು ಹಾಗೆಯೇ ಮುಂದುವರೆಸುವುದು ನನಗೆ, ಮುಜುಗರವೂ, ಕಷ್ಟವೂ ಆಯಿತು. ಕಡೆಗೊಂದು ದಿನ ನೆಹರೂಟೋಪಿಯನ್ನು ಕತ್ತರಿಸಿದು, ಬೋಳುತಲೆಗೆ ಬೆಳ್ಳಿಕೂದಲಿನಂಚಿನ ಚಿತ್ರಣ ಕೊಡುವುದರ ಮೂಲಕ ನಾನು ಮತ್ತೆ ಸ್ವಾತಂತ್ರ್ಯ ಹಾಗೂ ಮುಕ್ತಿ ಪಡೆದೆ. ಆ ವ್ಯಕ್ತಿತ್ವಕ್ಕೆ ಸಣ್ಣ ಬೊಜ್ಜನ್ನೂ ಸೇರಿಸಿ, ಅಲ್ಲಿಂದ ಮುಂದೆ, ಅವರು ಬದುಕಿದ್ದಷ್ಟೂ ಕಾಲ ನಿರಂತರ ವಾಗಿ ನನ್ನ ವ್ಯಂಗ್ಯಚಿತ್ರಗಳಿಗೆ ವಸ್ತುವನ್ನೊದಗಿಸಿಕೊಟ್ಟದ್ದಕ್ಕೆ ಋಣಿಯೂ ಆದೆ.

ನೆಹರೂ ಚಿತ್ರವನ್ನು ಬದಲಾಯಿಸುತ್ತಿದ್ದಂತೆ, ಅವರ ಸುತ್ತಮುತ್ತ ಇದ್ದ ಮಿಕ್ಕವರೂ ನನ್ನ ಸೇವೆಗಾಗಿ ಒಂದೊಂದು ಸ್ಥಾನವನ್ನಾಕ್ರಮಿಸಿಕೊಂಡರು: ಕೆ. ಎಂ. ಮುನ್ಷಿ, ಜಿ ಎಲ್. ನಂದಾ, ಜಗಜೀವನರಾಂ, ಎಸ್. ಕೆ. ಪಾಟೀಲ್, ಆರ್. ಎ. ಕಿದ್ವಾಯಿ, ಇತ್ಯಾದಿ ಜನರನ್ನು ಪಟ್ಟಿ ಮಾಡಬಹುದು. ಎಲ್ಲಕ್ಕಿಂತ ಮುಖ್ಯವಾಗಿ ನಾನು ವ್ಯಂಗ್ಯಚಿತ್ರಗಾರನಾಗಿ ಬೆಳೆಯಲು, ಖ್ಯಾತಿ ಗಳಿಸಲು ಎಲ್ಲ ರೀತಿಯಿಂದಲೂ ನನಗೆ ವಸ್ತುಗಳಾಗಿ ಸಹಾಯ ಮಾಡಿದವರೆಂದರೆ ಮೊರಾರ್ಜಿ ದೇಸಾಯಿ ಮತ್ತು ವಿ. ಕೆ. ಕೃಷ್ಣ ಮೆನನ್.

ಮಂತ್ರಿಗಳು ಮಂತ್ರಿಗಳ ಹಾಗೇಕೆ ಕಾಣುತ್ತಾರೆಂದು ನಾನು ಆಗಾಗ ಯೋಚಿ ಸುತ್ತೇನೆ. ಮಂತ್ರಿಗಳನ್ನು ನೋಡಿದಾಗ ಅವರೆಲ್ಲಾ ಬೇರೊಂದು ಜಾತಿಯ ಪ್ರಾಣಿ ಕುಲಕ್ಕೆ ಸೇರಿದವರೆನ್ನಿಸುತ್ತದೆ. ಈ ತತ್ವವನ್ನು ಸಮೀಪದಿಂದ ಪರೀಕ್ಷಿಸಿ ನೋಡುವ ಅದೃಷ್ಟ ನನಗೊಮ್ಮೆ ಒದಗಿ ಬಂತು. ಪ್ರತಿದಿನ ಕಾಣುತ್ತಿದ್ದ ಅತಿ ಸಾಮಾನ್ಯ ವ್ಯಕ್ತಿಯೊಬ್ಬ ಮಂತ್ರಿಯಾಗಿ ಪರಿವರ್ತನೆಗೊಳ್ಳುವುದನ್ನು ನಾನು ಹತ್ತಿರದಿಂದ ಗಮನಿಸಿದೆ. ತನ್ನ ಬಗ್ಗೆ ಸ್ವಲ್ಪ ಕೀಳರಿಮೆ ಇದ್ದ, ಗಂಭೀರನಾದ ಸ್ನೇಹಿತನೊಬ್ಬ ಎಲ್ಲರಿಗೂ ಗೊಂದಲ, ಆಶ್ಚರ್ಯ, ಭೀತಿ ಉಂಟುಮಾಡಿ ಮಂತ್ರಿ ಯಾಗಿಬಿಟ್ಟ.

ಅವನು ಮಂತ್ರಿಯಾದ ತಕ್ಷಣ ಕಂಡ ಪ್ರಮುಖ ಬದಲಾವಣೆ ಎಂದರೆ, ನಿಧ್ಯಕ್ಕಿದ್ದ ಹಾಗೆ, ರಾತ್ರೋರಾತ್ರಿ ಧನವಂತನಾದದ್ದು. ಬಹಳ ಬೇಗನೇ ತನ್ನ ಧಂಧೆಯಲ್ಲಿ ಸಂಪೂರ್ಣ ಮುಳುಗಿ, ಸುತ್ತಮುತ್ತ ತನ್ನಂತೆಯೇ ಆಲೋಚಿಸುವ ಅನುಚರರ ಕೋಟೆ ಕಟ್ಟಿಕೊಂಡು, ಹಳೆಯ ಸ್ನೇಹಿತರಿಗೆಲ್ಲ ದುರ್ಲಭನಾದ. ಆದರೂ ಆತ ಪ್ರತಿ ನಿತ್ಯ ಪತ್ರಿಕೆಗಳಲ್ಲಿ ಚಿತ್ರ ಛಾಪಿಸುವುದರ ಮೂಲಕ, ಸಜ್ಜಾದ ಎತ್ತರದ ವೇದಿಕೆಗಳಿಂದ ಜೋರಾಗಿ ಧ್ವನಿ ಹೊರಡಿಸುವುದರ ಮೂಲಕ, ಜನಸಾಮಾನ್ಯ ರೊಂದಿಗೆ ತನ್ನ ಸಂಪರ್ಕವನ್ನು ಜೀವಂತವಾಗಿರಿಸಿಕೊಂಡಿದ್ದ. ಬೆಲ್ಲದ ವ್ಯಾಪಾರಿ ಯಾಗಿದ್ದ ಇವನು ಮಾತನಾಡುತ್ತಿದ್ದ ವಿಷಯಗಳ ವೈವಿಧ್ಯತೆ, ಹಾಗೂ ಪರಿಣಿತನ ಅಧಿಕಾರವಾಣಿಗಳನ್ನು ಕಂಡಾಗ ನನಗೆ ಆಶ್ಚರ್ಯವಾಗುತ್ತಿತ್ತು. ಅವನ ಭಾಷಣಗಳ ವಿಸ್ತಾರ ಉಪ್ಪು ಬಿಸ್ಕತ್ತುಗಳ ಪ್ರಯೋಜನದಿಂದ ಹಿಂದೂ ಮಹಾಸಾಗರದಲ್ಲಿ ವಿದೇಶೀ ದಬ್ಬಾಳಿಕೆಯವರೆಗೆ, ಬಡತನ ನಿರ್ಮೂಲನ-ಬಂಡವಾಳಶಾಹಿಗಳ ದಮನ, ಭರತನಾಟ್ಯ, ರಾಸಾಯನಿಕ ಗೊಬ್ಬರಗಳು, ಮತ್ತು ಸಿ.ಐ.ಎ.ನ ಬೆದರಿಕೆಯವ ರೆಗೂ ಹಬ್ಬಿಕೊಂಡಿತ್ತು. ಈ ಯಾವ ವಿಷಯಗಳ ಬಗೆಗೆ ಮಾತನಾಡಿದರೂ ಕಡೆ ಗದು ನಾವು ದೇಶಕ್ಕಾಗಿ ಸಾಕಷ್ಟು ತ್ಯಾಗ ಮಾಡಿಲ್ಲವೆಂಬುದರಲ್ಲಿ ಪರ್ಯಾವಸನವಾ ಗುತ್ತಿತ್ತು. ನಮಗೆಲ್ಲಾ ತೀವ್ರ ಪಾಪ ಭೀತಿ ಕಾಡುವಂತೆ ತನ್ನ ದುಃಖ ತೋಡಿ ಕೊಂಡು, ದೇಶವನ್ನು ಉದ್ಧರಿಸಲು, ದೇಶಕ್ಕೆ ಮುಕ್ತಿ ಒದಗಿಸಲು ತಾನು ಮಾಡಿದ ಬಡಪಡಿಕೆಯ ಯತ್ನಗಳನ್ನು ಸಹ ಸವಿಸ್ತಾರವಾಗಿ ವಿವರಿಸಿಬಿಡುತ್ತಿದ್ದ.

ಅವನ ನಡೆನುಡಿಯಂತೆ, ದೇಹ ಲಕ್ಷಣಗಳೂ ಬೇಗನೇ ಬದಲಾದವು. ಸೌಖ್ಯದಿಂದ ಪೀಪಾಯಿ ಆಗಿದ್ದ ಅವನ ದೇಹಕ್ಕೆ ಮುಕುಟದಂತೆ ಅತಿಯಾಗಿ ಗಂಜಿ ಹಾಕಿದ ಟೋಪಿ, ಮತ್ತು ನೆಹರೂ ಜಾಕೆಟ್ಟು, ಅವನಿಗೊಂದು ವಿಚಿತ್ರ ಘನತೆ ಯನ್ನೂ ಒದಗಿಸಿಬಿಟ್ಟಿತು. ಕಡೆಕಡೆಗೆ ಆ ಘನತೆಯೂ ನಿಜವೇನೋ ಎಂಬ ಸುಳ್ಳು ನಂಬಿಕೆಯೂ ಹುಟ್ಟತೊಡಗಿತು. ಮಂತ್ರಿಯಾಗುವ ಮುಂಚಿನ ದಿನಗಳಲ್ಲಿ ಅಮಾ ಯಕತೆಯಿಂದ ನೇರ ದಿಟ್ಟಿಸುತ್ತಿದ್ದ ಅವನ ಪ್ರಾಮಾಣಿಕ ಕಂಗಳು ಈಗೀಗ ನೇರ ನೋಟವನ್ನೇ ಕೈಬಿಟ್ಟವು. ಈಗವನ ಕಂಗಳು ಯಾವಾಗಲೂ ದೀರ್ಘಾಲೋಚನೆ ಯಲ್ಲಿರುವಂತೆ, ತನ್ನ ಹೊಟ್ಟೆಯ ಮೇಲೆ ವಿರಾಜಿಸಿದ ಹೊಳೆವ ಕೋಟಿನ ಗುಂಡಿ ಗಳ ಮೇಲೆ ಕೇಂದ್ರೀಕೃತವಾಗಿರುತ್ತಿದ್ದವು. ತನ್ನ ವ್ಯಕ್ತಿ ಸಾಫಲ್ಯತೆಯ ಪರಮಾವಧಿ ಯಲ್ಲಿದ್ದ ಆತ ವಿಪರೀತ ಧನವಂತನಂತೆ, ಅಜೇಯನಂತೆ, ಪಂದೆತ್ತಿ ಗೆಲ್ಲುವ ಆಕ್ರ ಮಣಕಾರನಂತೆ, ಸರ್ವ ಶಕ್ತನಂತೆ ಕಂಡುಬರುತ್ತಿದ್ದ. ಸಿನಿಕತೆಯನ್ನು ಸಾಕಷ್ಟು ಪೋಷಿಸಿಕೊಂಡ ನಾನೂ ಸಹ ಆತನೆದುರು ಕೀಳರಿಮೆಯಿಂದ ಚಡಪಡಿಸುವುದನ್ನು ತಪ್ಪಿಸಲಾಗಲಿಲ್ಲ.

ಆದರೆ ಕ್ರೂರ ವಿಧಿ ಬೇಗನೇ ತನ್ನ ಲೀಲೆ ಪ್ರದರ್ಶಿಸಿತು ! ಪಕ್ಷದ ಒಳ ಜಗಳದ ಫಲಶ್ರುತಿಯಾಗಿ ಮಂತ್ರಿಮಂಡಲವನ್ನು ಪುನರ್ರಚಿಸಿದಾಗ ಈತನನ್ನು ಮಂತ್ರಿ ಮಂಡಲದಿಂದ ನಿಸ್ಸಂಕೋಚವಾಗಿ ಕೈ ಬಿಟ್ಟರು. ಈ ಸುದ್ದಿ ಕೇಳಿದ ಆಘಾತದಿಂದ ಆತ ತತ್ತರಿಸಿಹೋಗಿ, ತನ್ನೆಲ್ಲಾ ಗತ್ತನ್ನೂ ಬಿಟ್ಟು, ಮನೆಯ ಉದ್ದಗಲಕ್ಕೂ ಹಾಸಿದ್ದ ದುಬಾರಿ ಕಾರ್ಪೆಟ್‌ನ ಮೇಲೆ ಹೊರಳಾಡಿ ವಿಧಿಯನ್ನು ಶಪಿಸುತ್ತಿದ್ದ ದೃಶ್ಯವನ್ನು ನೋಡಿದಾಗ ನಿಜಕ್ಕೂ ದುಃಖ, ಆಘಾತಗಳುಂಟಾಗಿದ್ದವು. ಊರಲ್ಲೆಲ್ಲಾ ಈ ಬಗ್ಗೆ ಮೊದಲೇ ಗುಸುಗುಸು ಹಬ್ಬಿ, ಅದು ನಿಜವಿರಬಹುದೆಂಬ ಸ್ಪಷ್ಟ ಲಕ್ಷಣಗಳು ಕಂಡುಬಂದಾಗ್ಯೂ ಆತನಿಗೆ ಮಾತ್ರ ಇದು ಕ್ರೂರ ಅಪಘಾತ ವಾಗಿದ್ದಿರಬೇಕು. ಕಣ್ತುಂಬ ನೀರು ತುಂಬಿಕೊಂಡು ಸುತ್ತಲೂ ನೆರೆದಿದ್ದ ನಮ್ಮತ್ತ ನೋಡಿ, ತನ್ನ ಅದ್ಭುತ ವ್ಯಕ್ತಿತ್ವದ ಬಗ್ಗೆ, ಹಾಗೂ ತನ್ನ ಜತೆಯೇ ಇದ್ದು ಈಗ ಇನ್ನೂ ಮಂತ್ರಿಗಳಾಗಿ ಮುಂದುವರೆದು, ಹಣ, ಇನ್ನೂ ಹೆಚ್ಚಿದ ಹಣ ಮಾಡುವ ಅವಕಾಶಕ್ಕಾಗಿ ಬಕಪಕ್ಷಿಗಳಂತೆ ಕಾಯುತ್ತಿದ್ದ ಆ ಜನರ ಠಕ್ಕತನದ ಬಗ್ಗೆ ಅತ್ಯಂತ ಪ್ರಾಮಾಣಿಕ ದನಿಯಲ್ಲಿ ಹೃದಯಕ್ಕೆ ತಟ್ಟುವಂತೆ ಹೇಳಿದ. ಜತೆಗೆ ಅದುವರೆಗೆ ತಾನು ಭಕ್ತಿಯಿಂದ ಹಿಂಬಾಲಿಸಿದ್ದ ಮುಖ್ಯಮಂತ್ರಿಯ ಗುಟ್ಟುಗಳನ್ನೂ ಒಂದಲ್ಲ ಒಂದು ದಿನ ಬಹಿರಂಗಪಡಿಸುವುದಾಗಿ ಬೆದರಿಕೆ ಹಾಕಿದ.

ಹೀಗೆ ಗಂಟೆಗಟ್ಟಲೆ ಒದರಾಡಿ, ಅನಂತರ ಆಘಾತದಿಂದ ಚೇತರಿಸಿಕೊಂಡವನಾಗಿ, ಕಡೆಗೆ ಇದೂ ತನಗೆ ಖುಷಿಯನ್ನೇ ನೀಡಿದೆ ಎಂದು ಘೋಷಿಸಿದ. ಈಗ ಪ್ರಜೆಗಳ ಒಳಿತು, ತೊಂದರೆಗಳನ್ನು ನೋಡಿಕೊಳ್ಳಬೇಕಾದ, ರಾಜ್ಯ ಪಾಲಿಸಬೇಕಾದ, ಯಾವ ಕಿರಿಕಿರಿಯೂ ಇಲ್ಲದ, ಮುಕ್ತ ಬದುಕನ್ನು ಒಬ್ಬ ಸಾಮಾನ್ಯ ಪ್ರಜೆಯಾಗಿ ಬದುಕಲು ಅವಕಾಶ ದೊರೆತಿದ್ದರಿಂದ ತನ್ನನ್ನು ಮಂತ್ರಿಮಂಡಲದಿಂದ ಕೈಬಿಟ್ಟ ಈ ನಿರ್ಧಾರವೂ ತನಗೆ ಖುಷಿಯನ್ನೇ ನೀಡಿದೆಯೆಂದು ಸಮರ್ಥಿಸಿಕೊಂಡೂ ಬಿಟ್ಟ. ತನ್ನ ಸಂಸಾರ ವನ್ನು 'ತಕ್ಕ ರೀತಿಯಲ್ಲಿ' ನೋಡಿಕೊಳ್ಳಲು ಬೇಕಾದ ಏರ್ಪಾಟುಗಳನ್ನು ಸಾಕಷ್ಟು ಮಾಡಿರುವುದಾಗಿ ನನ್ನಲ್ಲಿ ಗುಪ್ತವಾಗಿ ಹೇಳಿದ. ಬಾಡಿಗೆಗಿತ್ತ ಎರಡು ಸಿನೇಮಾ ಥಿಯೇಟರುಗಳು, ಒಂದು ತ್ರೀ ಸ್ಟಾರ್ ಹೋಟೆಲು, ವಿದೇಶೀ ಕಂಪೆನಿಗಳಿಗೆ ಬಾಡಿಗೆಗಿತ್ತ (ಹೆಂಡತಿ ಹೆಸರಿನಲ್ಲಿದ್ದ) ನಾಲ್ಕು ಬಂಗಲೆಗಳು, ಮತ್ತೊಂದಿಷ್ಟು ಅಲ್ಲಿ ಇಲ್ಲಿಂದ ಬರುವ ಚೂರು ಚೂರು ಆದಾಯ—ತನ್ನ ಜೀವಮಾನ ಕಾಲವನ್ನು ಹೇಗಾದರೂ ತಳ್ಳಲು ಸಾಕೆಂದು ಅಪ್ಪಣೆ ಕೊಡಿಸಿದ.

ಈಗ ನೀವು ತುಂಬಾ ಖುಷಿಯಲ್ಲಿರುವಂತೆ ಕಾಣುತ್ತೀರಿ! ನಾಳೆಯ ಎರಡನೆಯ ಪಟ್ಟಿಯಲ್ಲಿ ನಿಮ್ಮ ಹೆಸರನ್ನು ಸೇರಿಸಿದರೆ, ಆಗ? ಆ ಪದವಿಯನ್ನು ಬೇಡ ಎನ್ನು ತ್ತೀರೋ ಅಥವಾ ಮಂತ್ರಿಪದವಿಗಾಗಿ ನಿಮ್ಮ ಖುಷಿಗಳನ್ನು ತ್ಯಾಗ ಮಾಡು ತ್ತೀರೋ'? ಎಂದು ಕೇಳಿದೆ.

ಒಂದು ಕ್ಷಣ ವಿಚಲಿತನಾದಂತೆ ಕಂಡರೂ, ಕೂಡಲೇ ಚೇತರಿಸಿಕೊಂಡ. 'ಅದು ಹಾಗೆ ಹೇಳಲು ಬರುವುದಿಲ್ಲ. ನಾನು ನನ್ನ ದೇಶಕ್ಕಾಗಿ ಯಾವುದೇ ಸ್ಥಾನ, ಪದವಿಯಿಂದಲಾದರೂ ಕೆಲಸ ಮಾಡಲು ಸದಾ ಸಿದ್ಧ ಎಂದು ತುಂಬಾ ನಮ್ರತೆಯಿಂದ ಕೈ ಮುಗಿದು ಉತ್ತರಿಸಿದ. ಆ ಕ್ಷಣದಲ್ಲಿ ಆತ ವ್ಯಂಗ್ಯಚಿತ್ರವೊಂದು ಜೀವ ತಾಳಿದಂತೆ ಕಂಡುಬಂದ!

ಮಂತ್ರಿಜಾತಿಗೆ ಸೇರಿದವರ ಒಳತಿರುಳು ಹೆಚ್ಚಿನಂಶ ಹೀಗೇ. ಜೀವಂತವಿರುವಷ್ಟು ಕಾಲವೂ ಮಂತ್ರಿಯಾಗೇ ಮುಂದುವರಿಯಬೇಕೆಂಬ ಆಸೆ. ಯಾವುದೇ ಪರಿಸ್ಥಿತಿಯಲ್ಲೂ ಅಧಿಕಾರ ಕೈಬಿಡಲು ಅವರು ತಯಾರಿರುವುದಿಲ್ಲ. ಕಾಲಾಂತರದಲ್ಲಿ ಅಕಸ್ಮಾತ್ ಯಾವುದಾದರೂ ಮಂತ್ರಿಯನ್ನು ರಾಜಕೀಯ ಅನುಕೂಲಕ್ಕಾಗಿಯೋ, ವಯಸ್ಸಿನ ಕಾರಣಕ್ಕಾಗಿಯೋ ನಿವೃತ್ತಗೊಳಿಸಿದರೆ. ಆತ ಬದಿಯಲ್ಲಿ ನಿಂತು ಮತ್ತೆ ಮಂತ್ರಿಮಂಡಳದೊಳಗೆ ತೂರಲು ತುಚ್ಛ ಬೇಡಿಕೆ ಸಲ್ಲಿಸುವುದರಿಂದ ಹಿಡಿದು ಬಹಿರಂಗ ಬೆದರಿಕೆಯವರೆಗೆ ಸೂಕ್ಷ್ಮ ಒತ್ತಡಗಳನ್ನು ಹೇರುತ್ತಲೇ ಇರುತ್ತಾನೆ. ಮಿಕ್ಕಂತೆ. ತಪ್ಪು ಮಾಡಿ ತೊಂದರೆಯೊಡ್ಡುವ ಮಂತ್ರಿಗಳನ್ನು ರಾಜ್ಯಪಾಲರನ್ನಾಗಿ ನೇಮಿಸುವುದರ ಮೂಲಕ ರಾಜಕಾರಣದಿಂದ ಹೊರದೂಡಲಾಗುತ್ತದೆ. ರಾಜಕಾರಣಿಗಳ ಅಭಿಪ್ರಾಯದಂತೆ. ಇದು ತಮ್ಮ ಸಾವಿಗೆ ಬೇಕಾದ ಏಕೈಕ ಪ್ರಕಾರ.

ನಮ್ಮ ರಾಜಕಾರಣಿಗಳು ವಿಪುಲವಾಗಿ ವ್ಯಂಗ್ಯಚಿತ್ರಗಾರನ ಕಾರ್ಖಾನೆಗೆ ಒದಗಿಸುವ ಈ ಕಚ್ಚಾ ವಸ್ತುವನ್ನು ನಾನು ನನ್ನ ಹಾಸ್ಯ ಪ್ರಜ್ಞೆಯೊಂದಿಗೆ ನೋಡುತ್ತೇನೆ. ಆದರೆ ನನಗೆ ಆಗಾಗ ತೀವ್ರ ಆತಂಕ ಆಗುವ ಕ್ಷಣಗಳೂ ಇವೆ. ಈಚೆಗೆ ರಾಜಕಾರಣಿಗಳು ಪ್ರವರ್ತಿಸುವ ರೀತಿ ನೋಡಿದರೆ ಅವರು ವ್ಯಂಗ್ಯಚಿತ್ರಕಾರನ ಕೆಲಸವನ್ನೂ ವೈಯಕ್ತಿಕವಾಗಿ ತಾವೇ ವಹಿಸಿಕೊಂಡು, ಜನ ವ್ಯಂಗ್ಯಚಿತ್ರಕ್ಕೆ ಬದಲು ತಮ್ಮನ್ನೇ ನೋಡಿ ನಗುವಂತೆ ಮಾಡುತ್ತಿದ್ದಾರೋ ಎಂದು ಭಯವಾಗುತ್ತದೆ. ಅಥವಾ ಜನರನ್ನು ರಂಜಿಸುವ ಈ ವೃತ್ತಿಯನ್ನೂ ಎಲ್ಲರೂ ಸಾಮೂಹಿಕವಾಗಿ ಒಂದು ನಿಗಮದ ಮೂಲಕ ಮಾಡಿದರೂ ಮಾಡಿಯಾರು.

ನಾನಿದನ್ನು ಬರೆಯುತ್ತಿದ್ದಂತೆ, ಮಂತ್ರಿಗಳೆಲ್ಲಾ ಇದನ್ನು ಅತಿರೇಕದ ಬರವಣಿಗೆ ಎಂದು ಖಂಡಿಸುವುದಲ್ಲದೇ ಇದು ಜನರನ್ನು ತಪ್ಪುದಾರಿಗೆಳೆವ ಪತ್ರಿಕಾರಂಗದ ಪಿತೂರಿಯ ಮತ್ತೊಂದು ಉದಾಹರಣೆ ಎಂದು ಕೂಗಾಡುವುದು ನನಗೆ ಕೇಳಿಸುತ್ತಿದೆ ಇದರ ಜತೆಗೆ 'ಅಧಿಕೃತ ಮೂಲಗಳು ಈ ಬಗ್ಗೆ ಸರಕಾರ ಹೊಂದಿರುವ ನಿಲುವು ನೀತಿಗಳನ್ನು ಈ ರೀತಿಯಾಗಿ ಬಹಿರಂಗಗೊಳಿಸಬಹುದೆಂದು ನನ್ನ ಊಹೆ : ''ಸರಕಾರಕ್ಕೆ ಮಹಾ ಜನತೆಯನ್ನು ನೇರವಾಗಿ ರಂಜಿಸುವ ಯಾವ ಉದ್ದೇಶವೂ ಇಲ್ಲ ಹಿಂದಿನಂತೆಯೇ ಮುಂದೆಯೂ ಸರಕಾರ ವ್ಯಂಗ್ಯಚಿತ್ರಗಾರರ ಮೂಲಕವೇ ಜನತೆಯನ್ನು ರಂಜಿಸುವುದು....''

# ಕತೆ ತಂದ ವ್ಯಥೆ

(ಪ್ರೇಮ ಸಂಪದಕಾರರಿಗಾಗಿ)

—ಅ. ರಾ. ಸೇ.

---

ಈಗ ಏನು ಉಳಿದಿದೆ ? ಎಲ್ಲಾ ತಿರುಮುರುವು. ಬಿಗ್ ಬಾಸೇ ಕರಪ್ಟಾದ ಮೇಲೆ, ಚಿಲ್ಲರೆ ಬಡಪಾಯಿ ಗುಮಾಸ್ತರನ್ನು ಅನ್ನಲು ಸಾಧ್ಯವೆ ? ಲೆಕ್ಕ ಹಾಕಿ, ಅಳೆದು ಹೊಯ್ದು, ವಿಜಯ ಕೆಫೆಗೆ ಹೋಗಿಯೇ ಬಿಡಬೇಕು; ಮೂರನೇ ಮಹಡಿಯನ್ನು ಹತ್ತಿಯೇ ಬಿಡಬೇಕು. ಅ.ಕ.ವಿ. ಪ್ರೇ.ಪದಲ್ಲಿ ಮುರಿದ ಮಾನಕ್ಕೆ ಪ್ಯಾಚ್ ಹಾಕಿಸಬೇಕು. ಒಡೆದ ಹೃದಯವನ್ನು ರಿಪೇರಿ ಮಾಡಿಸಿಯೇ ಬಿಡಬೇಕು ಎಂದು ಲೆಕ್ಕ ಹಾಕಿದೆ.

ಇದು ಇಗ್ನಾನ ಏಗ; ಈಗ ಇಂಥ ಕುಳಗಳ abstract ಬುದ್ಧಿವಾದ ರ್ಹುದಯವನ್ನು ಹೇಗೆ ಪತ್ತೆ ಹಚ್ಚೀತು ? ಇಸಿಜಿ ಮಾಡಿಸಿ ನೋಡೋಣ ಎಂದು ಹತ್ತಿರದಲ್ಲಿದ್ದ ನರ್ಸಿಂಗ್ ಹೋಮಿಗೆ ಹೋಗಲು ನಿಶ್ಚಯಿಸಿದೆ. ಹೋಗಿ ಪರೀಕ್ಷೆ ಮಾಡಿಸಿದರೆ ನಿನ್ನ ಹೃದಯ ಬಂಗಾರ; ಅಪರಂಜಿ, ಇನ್ನು ಇನ್ನೂರು ವರ್ಷವಾದರೂ ಇದಕ್ಕೆ ಏನೂ ಆಗುವುದಿಲ್ಲ. ಅಕಸ್ಮಾತ್ ನೀನು ಸತ್ತರೆ ನಿನ್ನ ಹಾರ್ಟ್ ಫೇಲಾಗಬಹುದು; ಹಾರ್ಟ್ ಫೇಲಾಗಿ ನೀನು ಸಾಯುವುದಿಲ್ಲ ಎಂದರು.

ಮನೆಗೆ ಬಂದು ನೋಡಿದರೆ ಹೃದಯದ ತುಂಬಾ ನೋವು ಇದ್ದೇ ಇತ್ತು. ಇನ್ನೂರು ಜನರನ್ನು ತುರುಕಿದ ಮಿನಿ ಬಸ್ಸಿನಂತೆ, ನೋವಿನ ಭಾರ ತಾಳದೆ ಕಿರುಗುಡುತ್ತಿದೆ.

ಹಗಲು ರಾತ್ರಿಯಾಗಿ, ರಾತ್ರಿ ಮುಂಜಾವಾಗಿ, ಮುಂಜಾನೆ ಕೆಸ್ಸಂಜೆಯಾಯಿತು. ನೋವಿಳಿಯಲಿಲ್ಲ.

ಸಾಹಿತ್ಯವು ಜೀವನದ ಪ್ರತಿಬಿಂಬ; ಅತ್ಯಂತ ಪ್ರಸಿದ್ಧವಾದ ಬರಹಗಳು ಕಲಾಕೃತಿಗಳಲ್ಲ; ಬರಹಗಾರರ ಆತ್ಮ ಚರಿತ್ರೆಗಳು. ಸಮಾಜವನ್ನು ಹೊಲಸಿಗಿಡಿಸಿ; ಅನಂತರ ತನ್ನ ಕೃತಿಯನ್ನೇ ಸಮಾಜದ ಕ್ರೌರ್ಯವೆಂದು ಬಿಂಬಿಸುವುದೇ ಅಲ್ಲವೇ ನಿಜವಾದ ಬರಹಗಾರರ ಕರ್ಮ ! (ಹೀನ ಕರ್ಮ ಎಂದೇನೂ ನಾನು ಹೇಳುತ್ತಿಲ್ಲ.) ಅಂದರೆ ಬರಹಗಾರನು ತಾನು ಕಾಣದ್ದನ್ನೇ ಬರೆಯಬೇಕೆಂದೇನೂ ಅಲ್ಲ. ಆದ್ದರಿಂದ ನಾನು ಬರೆದದ್ದು ನನ್ನ ಅನುಭವವಾದರೂ ಅದು ಪೂರ್ಣಾನುಭವವಲ್ಲ.

ನಾನು ನನ್ನ ನೋವನ್ನು ಕುರಿತು ಹೇಳುತ್ತಿರುವೆನೋ; ಸಾಹಿತ್ಯ ಚರ್ಚೆ ಮಾಡುತ್ತಿರುವೆನೋ ? ಸ್ವಲ್ಪ ತಡೆಯಿರಿ. ಉತ್ತರ ಸಿಕ್ಕುತ್ತದೆ.

ನಾನು ಯುವಕ; ನಾನು ಸುಂದರ; ಸ್ಫುರದ್ರೂಪಿ: ಕೈ ತುಂಬಾ ಹಣ: ಮನಸ್ಸಿನ ತುಂಬಾ ಚಿಂತನೆ. ನಾನು ಸಾಹಿತ್ಯ ಪ್ರೇಮಿಯೂ ಹೌದು. ಹೆಚ್ಚೇನು ಹೇಳಲಿ ನಾನು ಕತೆಗಾರ.

ಆಫೀಸಿನಲ್ಲಿ ನನ್ನದು ಒಂದು ಸ್ವತಂತ್ರ ಹುದ್ದೆ. ಇಬ್ಬರು ಡೈರೆಕ್ಟರುಗಳು, ಒಬ್ಬ ಅಪರ ಡೈರೆಕ್ಟರು ಇದ್ದರೂ, ಯಾವ ದೊಣೆ ನಾಯಕನೂ, ನನ್ನ ಮೇಲೆ ಸವಾರಿ ಮಾಡುವಂತಿಲ್ಲ. ನಾನು ಒಂಟಿ ಸಲಗ: ಕೆಲಸವೇನೂ ಹೆಚ್ಚಿಲ್ಲ; ಆರ್ಥಿಕ ಜವಾಬ್ದಾರಿ ಇಲ್ಲದ ಹುದ್ದೆ. ಕ್ಯಾಷ್ ರಿಜಿಸ್ಟರು; ವೌಚರ್‌ಗಳ ಕಾಟವಿಲ್ಲ. ನಾನು ಏನು ಹೇಳಿದರೂ ಅಪರ ಡೈರೆಕ್ಟರು ಯೆಸ್ ಅನ್ನುತ್ತಾನೆ. ಡೈರೆಕ್ಟರುಗಳು ಸಮ್ಮತಿಸುತ್ತಾರೆ. ಆಗಾಗ ಅವರು ಸಮ್ಮುಖಕ್ಕೆ ಕರೆದು ನೀರುಳ್ಳಿಯ ಬೆಲೆ; ವಾಷಿಂಗ್ ಮೆಷಿನ್ ಮಿಕ್ಸಿಗಳ ರಿಪೇರಿ ಮಾಡಿಸುವ ತಾಪತ್ರಯ; ಇದ್ದರು ಕಟ್ಟಾ ರೌಡೀಲು ಸಿನಿಮಾದಲ್ಲಿ ಹೀರೋಯಿನ್ ಹೆಚ್ಚು ಆಕರ್ಷಕವಾಗಿರುವಳೋ, ಕ್ಯಾಬರೆ ಕಲಾವಿದೆಯೋ ಎಂಬ ಶಂಕೆ, ಇತ್ಯಾದಿಗಳನ್ನು ನನ್ನೊಡನೆ ಪ್ರಾಂಜಲ ಮನಸ್ಸಿನಿಂದ ತೋಡಿಕೊಳ್ಳುತ್ತಾರೆ. ಅವರದು ಕಾಫಿ, ಅವರದೆ ಸಿಗರೇಟ್.

ನನ್ನ ಕತೆಗಳಿಗೆ ಎಲ್ಲಿಲ್ಲದ ಡಿಮ್ಯಾಂಡ್: ಟಾನ್ಜೇನಿಯಾ. ಮಾಲಿ. ಜಾಂಬಿಯಾ: ಹಾಂಡುರಾಸ್; ನೈಜೀರಿಯಾಗಳ ಉದ್ದಾಮ ಕತೆಗಾರರ ಕತೆಗಳೊಡನೆ ನನ್ನ ಕತೆಗಳನ್ನು ಹೋಲಿಸಲಾಗುತ್ತಿದೆ. ಟಿ.ವಿ., ಸಿನಿಮಾಗಳೂ ನನ್ನತ್ತ ಕಬಂಧ ಬಾಹುಗಳನ್ನು ಚಾಚುತ್ತಿವೆ – ನಿದಾನವಾಗಿ. ಇಂತಹ ಅಭ್ಯುದಯ ಕಾಲದಲ್ಲೇ ನನ್ನ ಹೃದಯದ ತುಂಬಾ ನೋವು ತುಂಬಿದೆ. ಅಖಿಲ ಕರ್ನಾಟಕ ವಿಫಲ ಪ್ರೇಮಿಜನ ಪರಿಷತ್ತಿನ ಪ್ರೇಮ ಶಿಬಿರಕ್ಕೆ ಹೋಗಬೇಕೆಂಬ ಆಸೆಯಾಯಿತು. ಅದರ ಅಧ್ಯಕ್ಷರನ್ನು ತಥಾಗತ ಎನ್ನುತ್ತಾರೆ. ಆತನು ಸದಸ್ಯರನ್ನು ಭಿಕ್ಕೂ ಎಂದು ಕರೆಯುತ್ತಾನೆ. ನನ್ನನ್ನು ನೋಡಿದೊಡನೆ ತಥಾಗತನು ನನ್ನ ಬಳಿ ಬಂದು, ಒಂದು ಎಕ್ಸ್‌ಟ್ರಾ ರವೆ ಉಂಡೆ, ಒಂದು ಎಕ್ಸ್‌ಟ್ರಾ ಉದ್ದಿನೊಡೆಗಳಿಗೆ ಆರ್ಡರ್ ಕೊಟ್ಟು, ನನ್ನ ಕತೆಯನ್ನು ಬರೆದು ಪರಿಶೀಲನೆಗಾಗಿ ತನ್ನ ಬಳಿಗೆ ತರಲು ಹೇಳಿದ. ಅದಕ್ಕೊಂದು ಟೈಟಲ್ ಸಹಾ ಕೊಟ್ಟ.

### ವ್ಯಥೆಗಾರನ ಕತೆ

ಆಫೀಸಿನಲ್ಲಿ ಕುಳಿತು ಅಂದು ಅತ್ಯಗತ್ಯವಾಗಿ ಮಾಡಲೇಬೇಕಾಗಿದ್ದ ಕೆಲಸಗಳ ನೆನಪೋಲೆಯನ್ನು ತೆಗೆದೆ. ಅಂದು ಮಾಡಲೇಬೇಕಾಗಿದ್ದುದು ಏನೂ ಇರಲಿಲ್ಲ.

ಆಕಸ್ಮಿಕವಾಗಿ ನನ್ನೆದುರು ಕುಳಿತಿದ್ದ ಟೈಪಿಸ್ಟನ್ನು ಗಮನಿಸಿದೆ. ಏನು ಮಧುರವಾದ ಮುಖ! ಎಂತಹ ಗಂಭೀರ ಭಾವ! ಅವಳ ವಿಧೇಯತೆ, ವಿಶ್ವಾಸಾರ್ಹತೆಗೆ ನಾನು ಮನಸೋತಿದ್ದೇನೆ. ನಾನು ಬರೆದ ಇಂಗ್ಲಿಷ್ ಲೇಖನಗಳನ್ನು ಗೊಣಗುಡದೆ ಟೈಪ್ ಮಾಡಿಕೊಟ್ಟಿದ್ದಾಳೆ. ನನಗೆ ಬಂದ ಸಂಭಾವನೆ ಸಾಕಷ್ಟಿದ್ದರೂ ಅವಳಿಗೆ ಒಂದು ಕಾಫಿಯನ್ನೂ ನಾನು ಕೊಡಿಸಿಲ್ಲ. ಇದಕ್ಕೇನು ಪ್ರಾಯಶ್ಚಿತ್ತ? ಪ್ಯಾಡಿನ ಹಾಳೆ ಹರಿದು ಬರೆದೆ :

"ಓ ಮೌನ ಸುಂದರೀ, ನಿನ್ನನ್ನು ನನ್ನ ಹೃನ್ಮಂದಿರದಲ್ಲಿ ಪೀಠದ ಮೇಲೆ ಕೂಡಿಸುತ್ತೇನೆ. ನನ್ನ ಹೃದಯದ ಭಾವಾಂಜಲಿಯನ್ನು ಕಾಣಿಕೆಯಾಗಿ ಅರ್ಪಿಸುತ್ತೇನೆ. ನಾನೆನ್ನೆಂದೂ ಬಿರುಗಾಳಿಯನ್ನು ಅಪ್ಪಿ ಗಾಸಿಗೊಳ್ಳುವುದಿಲ್ಲ. ನಿನ್ನನ್ನು ತೆರೆದ ತೋಳುಗಳಿಂದ ಬರಸೆಳೆದು, ಅಪ್ಪಿ....

ಓ ಕುಸುಮ ಕೋಮಲೇ........ ನನ್ನೆದೆಯನ್ನೇಕೆ ವಜ್ರಾಯುಧದಿಂದ ಇರಿಯುತ್ತಿರುವೆ? ನಾನು ಹಿಂದೆ ಸ್ಯಾಂಸನ್ನನಾಗಿದ್ದಾಗ ನೀನೇನಾಗಿದ್ದೆ ? ಯುಗಯುಗಗಳ ಗಂಟು, ಇಂದು ನಂಟಾದೀತೆ? ಯತ್ನಿಸುತ್ತೇನೆ. ಈ ಭಾನುವಾರ ನಿನ್ನ ಮನೆಯಲ್ಲೇ ಊಟ."

ಇನ್ನೂ ಏನೇನು ಬರೆಯುತ್ತಿದ್ದೆನೋ, ಅಷ್ಟರಲ್ಲಿ ಅಪರ ಡೈರೆಕ್ಟರು ಹೇಳಿ ಕಳಿಸಿದರು. ಅದೇನೋ ರಿಪೋರ್ಟು ಕೊಡುತ್ತೇನೆ ಎಂದಿದ್ದಿರಲ್ಲ, ಈಗ ಬೇಕು ಎಂದರು. ನಾನು ಟೈಪ್ ಮಾಡಿಸಬೇಕು ಎಂದೆ. ಅವರು ಆಳನ್ನು ಕರೆದು 'ಇವರ ಟೇಬಲ್ ಮೇಲೆ ಇರುವ ರಿಪೋರ್ಟನ್ನು ಟೈಪ್ ಮಾಡಿಸಿಕೊಂಡು ಬಾ' ಎಂದರು. ನಾನು 'ಫೈಲ್ ತೆಗೆದು ಮೇಲೇ ಇರುವ ರಿಪೋರ್ಟನ್ನು ಟೈಪ್ ಮಾಡಿಸಿಕೊಂಡು ಬಾ' ಎಂದು ಹೇಳಿದೆ. ಹತ್ತು ನಿಮಿಷದಲ್ಲಿ ಅವನು ರಿಪೋರ್ಟನ್ನು ತಂದು ಕೈಗೆ ಕೊಟ್ಟ. ರಿಪೋರ್ಟನ್ನು ಅಪರ ಡೈರೆಕ್ಟರಿಗೆ ಕೊಡುವ ಮುನ್ನ ಒಮ್ಮೆ ನೋಡಿ ಬಿಡೋಣ ಎಂದು ಮಡಿಕೆ ಬಿಚ್ಚಿದೆ.

ಮೊದಲ ಸಾಲು ಹೀಗಿತ್ತು.
ಓ ಮೌನ ಸುಂದರೀ...."
ಶಿವ ಶಿವಾ ಸಿದ್ದೇಶಾ, ನನ್ನನ್ನು ಉಳಿಸಿದೆ ಎಂದುಕೊಂಡು
"ಎಲ್ಲಿತ್ತು ?" ಎಂದು ಸಿಟ್ಟಿನಿಂದ ಚೀರಿದೆ.
''ಫೈಲ್ ಮೇಲೇ ಇತ್ತು" ಎಂದ.
"ಸರಿ ಸರಿ ಇದಲ್ಲ. ನಾನೇ........''
''ನೀವು ಹೇಳಿದಿರಲ್ಲ ಸಾ"

"ಅಯ್ಯೋ ನಿನ್ನ 'ಸಾನ ಕುಟ್ಟು, ಫೈಲ್ ಒಳಗೆ, ಮೇಜೇ ಇದೆ ಎಂದೆ".

''ಏನ್ರೀ ಅದು! " ಅಪರರು ಕೇಳಿದರು.

''ಚಿದಂಬರ ರಹಸ್ಯ ಸರ್. ಕೆಲವು ಸತ್ಯಗಳನ್ನು ಪ್ರಯೋಗದಿಂದ ಪ್ರಮಾಣೀಕರಿಸಲು ಅಸಾಧ್ಯ. ಅದಕ್ಕೆ ಲಾ ಆಫ್ ಇನ್‌ಡಿಟರ್ಮಿನಸೀ ಅಂತಾರೆ. ನಾನೇ ಹೋಗಿ ತರುತ್ತೇನೆ.''

"ಕೂತ್ಕೊಳಯ್ಯ. ನಿನ್ನ ರಿಪೋರ್ಟಿಲ್ಲದಿದ್ದರೆ ಅಷ್ಟೇ. ಒಂದು ವಿಷಯ ನಿನ್ನಿಂದ ತಿಳಕೋಬೇಕು. ವಿಷ್ಣುವರ್ಧನ್, ಚಿರಂಜೀವಿ, ಮಿಥುನ್, ಅನಿಲ್ ಕಪೂರ್ ಇವರಲ್ಲಿ ಯಾರು ಬೆಸ್ಟು? "

ಅಪರರಿಗೆ ಉತ್ತರ ಹೇಳದ, ಟೇಬಲ್ಲಿಗೆ ಹಿಂದಿರುಗಿದೆ. ಹಾಗೂ ಕೆಟ್ಟೆ, ಹೀಗೂ ಕೆಟ್ಟೆ ಎಂದು ಪ್ಯಾಡ್ ಬುಕ್ಕಿನಲ್ಲಿ ಇನ್ನೊಂದು ನೋಟ್ ಹಾಕಿದೆ.

"ಎನ್ನ ಒಡಲಾಳದ ಬಾಂಚೇ, ನೀನಿಲ್ಲದೆ ನಾನು ಏನು? ನನ್ನ ಉತ್ತರ ಇಲ್ಲಿದೆ. ನಿನ್ನುತ್ತರವೇನು? ನಾನು ಶೂನ್ಯ. ನೀನೂ ಇಲ್ಲವಾದರೆ ನಾನು ಮೈನಸ್ ಒಂದು (—1)."

ಇದನ್ನೂ ಟೈಪ್ ಮಾಡಿ ಎಂದು ಬರೆದು ರಿಪೋರ್ಟನ್ನೂ, ಚೀಟಿಯನ್ನೂ ಅವಳಿಗೆ ಕೊಟ್ಟು ಆಫೀಸಿನಿಂದ ಹೊರಕ್ಕೋಡಿದೆ. ಮಂಗಳ, ಬುಧ, ಗುರು. ಶುಕ್ರ ವಾರಗಳು ಮುಗಿದವು. ಶನಿವಾರ ಆಫೀಸಿಗೆ ಹೋದೆ. ಡೈರೆಕ್ಟರುಗಳೂ. ಅಪರರೂ ನನ್ನ ತಂಟೆಗೆ ಬರಲಿಲ್ಲ. ಅವಳು ತಡವಾಗಿ ಬಂದಳು. ಹದಿನಾಲ್ಕು ಮೊಳದ ರೇಷ್ಮೆ ಸೀರೆ. ಏನೇನೋ ಆಭರಣಗಳು. ಅರಿಸಿನ ಬಳಿದ ಕೆನ್ನೆ. ಹಣೆಯಲ್ಲಿ ಕುಂಕುಮದ ತಿಲಕ. ನನ್ನ ಭಾವನೆಗಳು, ನನ್ನೆದುರಿನಲ್ಲೇ ಮೈತಾಳಿ ಮೂರ್ತರೂಪದಿಂದ ಬಂದಂತೆ !

ಮಧ್ಯಾಹ್ನದ ಬಿಡುವಿನ ವೇಳೆ. ನಾನು ಹೊರಕ್ಕೆ ಹೋಗಲಿಲ್ಲ. ಪ್ಯಾಡ್‌ನಲ್ಲಿ ಗುರುತು ಹಾಕುತ್ತಿದ್ದೆ.

"ಪ್ರೇಮ ನಾಮಪದವಾಗಿರುವ ತನಕ ಪ್ರೇಮ. ಕ್ರಿಯಾಪದವಾದರೆ, ಏನಾಗ? ಪ್ರೇಮವೂ ನನ್ನಂತೆ ಕ್ರಿಯಾಪದವಾದೊಡನೆ ಅದು ಮೈನಸ್ ಒಂದು".

ಅವಳು ನನಗೆ ''ಭಾನುವಾರ ಮನೆಗೆ ಊಟಕ್ಕೆ ಬನ್ನಿ'' ಎಂದಳು.

ಭಾನುವಾರ ಹನ್ನೊಂದು ಗಂಟೆಗೆ ಅವಳ ಮನೆಗೆ ಹೋದೆ. ಅವಳ ತಂದೆ ನನ್ನನ್ನೆದುರುಗೊಂಡರು. ಮನೆ ತುಂಬಾ ಜನ. ಅವಳು ನನ್ನ ಕಡೆಗೇ ನೋಡಲಿಲ್ಲ ಯಾರೂ ಮಾತಾಡಿಸಲಿಲ್ಲ. ಏನು ವಿಶೇಷ ಎಂದು ಕೇಳಿದೆ.

"ಗೌರಿಯ ಮದುವೆ ಗೊತ್ತಾಗಿದೆ. ವರನ ಕಡೆಯವರು ಬಂದಿದ್ದಾರೆ. ಮುಂದಿನ ಶುಕ್ರವಾರ ನಿಶ್ಚಿತಾರ್ಥ. ನೀವು ಸಂಕೋಚ ಪಟ್ಟುಕೊಳ್ಳ ಬೇಡಿ. ನಿಮ್ಮ ವಿಷಯವನ್ನೆಲ್ಲಾ ಗೌರಿ ಹೇಳಿದ್ದಾಳೆ" ಎಂದು ಅವಳ ತಂದೆ ಹೇಳಿದರು.

ಸಿಹಿಯೂಟ ಮರದ ಹೊಟ್ಟಾಯಿತು. ಫ್ರೆಂಚರು ವಿಯತ್ನಾಂನಿಂದ ಹೊರ ಬಂದಂತೆ ಹಿಂದಿರುಗಿ ಬಂದೆ.

ಇದ್ದದ್ದನ್ನು ಇದ್ದ ಹಾಗೇ ಬರೆದು, ಕೊನೆಗೊಂದು ಬಾಲಂಗೋಚಿ ಸೇರಿಸಿದೆ.

ಕಥಾನಾಯಕಿಯ ಮದುವೆ ವೈಭವದಿಂದ ಜರುಗಿತು. ಹನಿಮೂನಿಗೆ ಇಬ್ಬರೂ ಊಟಿಗೆ ಹೋದರು. ನಾಯಕಿಯ ಗಂಡ ಕಾಡಾನೆಯ ದಾಳಿಗೆ ಬಲಿಯಾದ.

ನಾನು ನಾಯಕಿಗೆ ಒಂದು ಪತ್ರ ಬರೆದು "ಸಿದ್ಧನಿದ್ದೇನೆ" ಎಂದು ತಿಳಿಸಿದೆ. ಕತೆಯನ್ನು ಪತ್ರಿಕೆಗೆ ಕಳಿಸಿದೆ. ಮೂರೇ ವಾರಗಳಲ್ಲಿ ಅದು ಅಚ್ಚಾಯಿತು,

## ಕತೆ ತಂದ ವ್ಯಥೆ

ನನ್ನ ಅನೇಕ ಕತೆಗಳು ಟಿವಿಗೆ ಗ್ರಾಸವಾಗಲಿವೆ. ಎನ್ನವರೊಲಿದು ಹೊಗಳಿಕೆಯ ಹೊನ್ನ ಶೂಲಕ್ಕೇರಿಸಿದ್ದಾರೆ. ಆದರೆ ನನಗೆ Fan mail ಬಂದುದು ಇದೊಂದಕ್ಕೇ. ಎರಡು ಪತ್ರಗಳ ಸಾರವನ್ನು ಮಾತ್ರಾ ಕೊಡುತ್ತಿದ್ದೇನೆ.

೧. ತಮಿಳುನಾಡು ತಾಂಬರಂ ಕನ್ನಡ ಮಹಿಳಾ ವನಿತಾ ಸ್ತ್ರೀ ನಾರೀ ವಿಮೋಚನ ಸಂಘ: ಮಹಿಳೆಯರ ಉದ್ಧಾರಕ್ಕಾಗಿ ನೀವು ಸಾಹಿತ್ಯರಂಗದಲ್ಲಿ ಮಾಡಿರುವ ಸಾಧನೆಗಾಗಿ ನಿಮ್ಮನ್ನು ಅಭಿನಂದಿಸುತ್ತೇವೆ. ನಮ್ಮ ವಾರ್ಷಿಕ ಸಮಾವೇಶದ ಮುಖ್ಯ ಅತಿಥಿಗಳಾಗಿ ಆಗಮಿಸಬೇಕೆಂದು ಬಿನ್ನವಿಸುತ್ತೇವೆ.

೨. ಅಣ್ಣಾ, ನೀನರಿಯದ ಈ ತಮ್ಮನ ಅಜ್ಞಾನಾಂಧಕಾರ ತುಂಬಿದ ಮನದ ಕಣ್ಣುಗಳನ್ನು ತೆರೆಯಿಸಿರುವೆ. ನಿನ್ನ ಕತೆಯ ನಾಯಕನ ಆದರ್ಶವನ್ನೇ ಅನುಸರಿಸಲು ಪ್ರತಿಜ್ಞೆ ಮಾಡಿದ್ದೇನೆ. ಎಲ್ಲಕ್ಕೂ ಸಿದ್ಧವಾಗಿದ್ದೇನೆ.

-ಶುಭಂ-

ಈ ಕತೆಯನ್ನು ಪರಿಶೀಲಿಸಿದ ಅಧ್ಯಕ್ಷರು, "ನಿನಗೆ ಏನೂ ಆಗಿಲ್ಲ. ಕೆಲವರು ಪ್ರೇಮಿಸುತ್ತಾ ಹೋಗುತ್ತಾರೆ. ಈ ನಿನ್ನ ಆತ್ಮಕಥನದ ಬಗೆಗೆ ನನ್ನ ಅಭಿಪ್ರಾಯವನ್ನು ಈ ಚೀಟಿಯಲ್ಲಿ ಬರೆದಿದ್ದೇನೆ. ನಿನ್ನ ಹೃದಯಕ್ಕೆ ಏನೂ ಆಗಿಲ್ಲದಿದ್ದರೂ, ಅದು ನೋವಿನಿಂದ ತುಂಬಿರಲು ಏನು ಕಾರಣ ಎಂದು ಸ್ಪಷ್ಟವಾಗಿ ಬರೆದಿದ್ದೇನೆ. ಇದನ್ನೋದು. ಪ್ರತಿಕ್ರಿಯೆಯಾಗಿ ಹೌದು ಅಥವಾ ಇಲ್ಲ ಎಂದು ಹೇಳು" ಎಂದರು. ಅವರ ಚೀಟಿಯಲ್ಲಿ ಹೀಗ ಬರೆದಿತ್ತು.

"ವಿಫಲ ಪ್ರೇಮದಿಂದ ಹೃದಯ ಭಗ್ನವಾಗುವುದಿಲ್ಲ. ಆದರೆ ನಿನಗೆ ಬಂದ ಮೆಚ್ಚುಗೆಯ ಪತ್ರಗಳು ನಿನಗೆ ನೋವನ್ನುಂಟು ಮಾಡಿವೆ."

ನಾನು ಮೆಲುನಗೆಯಿಂದ ''ಹೌದು" ಎಂದೆ.

---



''ಲವಕಂಶ ಆಗ್ಬೇಕು ಅಂತ
ಕುಣಿದಾಡ್ತಿದ್ರಲ್ಲಾ—'
ಬಿಲ್ಲು ತೆಗೆಸ್ಕೊಟ್ಬಿಟ್ನಿ—
ಈಗ್ನಿಮ್ಮಪ್ಪಂಗೇಳಿ ಕಾಡ್ಗೋಗೂ
ಅಂತ"

## ನಕ್ಕಾಂವಾ ಗೆದ್ದಾಂವಾ

—ಶೀನೂ

ಮೊನ್ನೆ ರವಿವಾರ ಹಳ್ಳಿಯಿಂದ ನಮ್ಮ ಹಳೇ ಒಕ್ಕಲು ಚನ್ನಪ್ಪ ಬಂದಿದ್ದ ಸರಿಯಾಗಿ ಟಿ.ವ್ಹಿ. ಭಾರತದ ಸಮಯಕ್ಕೆ.

ಗೋಡೆಗೊರಗಿ ಕೂತು ಭಕ್ತಿಯಿಂದ ಕೈ ಮುಗಿದು ಭಾರತವನ್ನು ನೋಡುತ್ತಿದ್ದ ಚನ್ನಪ್ಪ ದ್ರೌಪದೀ ವಸ್ತ್ರಾಪಹರಣದ ವೇಳೆಗೆ ಸಾಕಷ್ಟು ಕ್ಷೋಭೆಗೊಂಡಿದ್ದ, ಕ್ರುದ್ಧನಾಗಿದ್ದ. ಕೊನೆಕೊನೆಗಂತೂ ದುಃಖಿಸಿ, ದುಃಖಿಸಿ, "ಅಯ್ಯೋ .... ಹೆಣ್ಣು ಬಾಲೀ ಪಾಪs ........ಹೆಣ್ಣ ಮಗಳ ಗತೀನs" ಎಂದು ಒಟಗುಡುತ್ತ ಗಟ್ಟಿಯಾಗಿ ಅತ್ತು ಬಿಟ್ಟ. ಮನೆಯಲ್ಲಿ ನಮ್ಮೆಲ್ಲರ ಅವಸ್ಥೆಯೂ ಚನ್ನಪ್ಪನಂತೆಯೇ ಆಗಿತ್ತು. ಆದರೆ ನಾವೆಲ್ಲ ಸುಶಿಕ್ಷಿತರಾದುದರಿಂದ ಮೌನವಾಗಿ ಇಂಗ್ಲೀಷಿನಲ್ಲಿ ಅಳುತ್ತಿದ್ದೆವು,

ಟಿ. ವ್ಹಿ. ಭಾರತದ ಅಂದಿನ ಅಧ್ಯಾಯ ಮುಗಿದು ಕಾಫಿ ತಿಂಡಿಯಾಗುತ್ತಿದ್ದಂತೆಯೇ ಚನ್ನಪ್ಪ ಕೇಳಿದ.

"ಅಧೆಂಗರೀ ಆ ಭೀಶಮ ದರೋಣ ಇಪ್ಪೆಲ್ಲಾ ಶಾಣ್ಯಾ ಮುಂದೆಲ್ಲಾ ಕುಂತು ಆ ಹೆಣಮಗಳಿಗೆ ಅಂತಹ ಗತಿ ತಂದರಲ್ಲರೀ........ ಆ ದುರ್ಯೋಧನಗ ಎರಡು ಬಿಗದು ಆ ಹುಡುಗಿನ್ನ ಬಿಡಿಸಿಕೊಳ್ಳಾಕ ಬರಲಿಲ್ಲೇನ್ರಿ....ಇವರಿಗೆ", ಎಂದು.

"ಭೀಷ್ಮ, ದ್ರೋಣ ಅವರೆಲ್ಲ ದುರ್ಯೋಧನನ ಋಣದಾಗ ಬಿದ್ದಿದ್ದರಲ್ಲಪ್ಪ", ಎಂದೆ.

"ಅದೆಂತಹ ರಿಣರೀ ಅದು........," ಎಂದ ಚನ್ನಪ್ಪ.

"ನೋಡು, ಅವರೆಲ್ಲ ಆ ದುರ್ಯೋಧನನ ಉಪ್ಪು ಉಂಡಿದ್ದರಪಾ. ಅವನ ಮನೀ ಅನ್ನದ ಋಣ ಇತ್ತಪ ಅವರ ಮ್ಯಾಲೆ," ಎಂದೆ.

"ಅದೆಂತಹ ಉಪ್ಪೋ-ಅದೆಂತಹ ಅನ್ನನೋ ಬಿಡಿ", ಎಂದ ಚನ್ನಪ್ಪ. ನಾನು ಚನ್ನಪ್ಪನಿಗೆ ತಿಳಿಸಿ ಹೇಳುವ ಛಲದಲ್ಲಿ,

"ನೋಡು. ಚನ್ನಪ್ಪ. ಯಾವದs ಕಾರಣಕ್ಕೆ ಒಬ್ಬ ಮನಿಶ್ಯಾ ಇನ್ನೊಬ್ಬರ ಛಿಡೇದಾಗ ಬದ್ದಾ ಅಂದರ ತೀರಿತು. ದುಡ್ಡಿನ ಋಣ–ಅನ್ನದ ಋಣ–ಉಪ್ಪಿನ ಋಣ, ಅಷ್ಟೆಲ್ಲ ಯಾಕs........ ಈಗ ಒಂದ ಕಪ್ಪ ಚಹಾಕ್ಕ....ಬರೇ ಒಂದು ಕಪ್ಪ ಚಹಾಕ್ಕ–ಏನೆಲ್ಲ ಕೆಟ್ಟ ಕೆಲಸ ಮಾಡತಾರಲ್ಲ ಮಂದೀ........ ಯಾವದs ಕಚೇರಿ, ಕೋರ್ಟು, ಆಫೀಸು, ಎಲ್ಲೇ ಹೋದರೂ........ ಮದ್ಲ ಗುಮಾಸ್ತರನ್ನೆಲ್ಲ ಚಹಾಕ್ಕೆ ಕರೀತಾರಲ್ಲs ಯಾಕ ? ........ " ಎಂದು ಇನ್ನೂ ಏನೇನೋ ಹೇಳುತ್ತಿದ್ದಂತೆಯೇ ಚನ್ನಪ್ಪ," "ತಿಳೀತು ಬಿಡ್ರಿ........ತಿಳೀತು.... ಖರೇವ ಆಯ್ತು ನಿಮ್ಮ ಮಾತು ಎಂದ. ತುಸು ಹೊತ್ತು ಏನೋ ಧ್ಯಾನಿಸಿ, ಕ್ಷಣ ಬಿಟ್ಟು ಮತ್ತ ಚನ್ನಪ್ಪ, "ಅಂದರೂ ನಮ್ಮ ನಶೀಬ ಇನ್ನೂ ಸಾಕಷ್ಟು ಒಳ್ಳೇದ ಅಯ್ತಿ ಅನಬೇಕರಿ," ಎಂದ.

" ಯಾಕೋ ?" ಎಂದೆ ತಿಳಿಯದಾಲೇ.

"ಮತ್ತ ಸಾಕ್ಷಾತ್ ಆ ಶ್ರೀ ಕೃಷ್ಣ ಪರಮಾತಮ ಅಂವ ಕೂಡ ಆ ದುರ್ಯೊದನನ ಮನೀ ಚಹಾ ಕುಡದಿದ್ರ ಏನ ಗತಿ ಇತ್ತರೀ ?'' ಎಂದ. ನಾನು ನಡುಗಿದೆ.

**ಮುಂಬಯಿ ಜೀವನ**

ಮೊನ್ನೆ ಸಂಜೆ ಆಫೀಸ್ ಮುಗಿಸಿಕೊಂಡು "ಮರೀನ್ ಡ್ರ್ಯೈವ್''ದ ಮೇಲಿಂದ ಮನೆಗೆ ಹೊರಟಿದ್ದೆ, ಕಾರು ಬಿಟ್ಟುಕೊಂಡು. ಜನಸಂದಣಿ, ಕಾರು ಸಂದಣಿ ಎಂದಿಗಿಂತ ತುಸು ಹೆಚ್ಚಾಗಿಯೇ ಇತ್ತು. ಚೌಪಾಟಿಯ ಬಳಿಗಂತೂ ನೂಕು ನುಗ್ಗಲು ವಿಪರೀತ ವಾಗಿ, ವಾಹನಗಳೆಲ್ಲಾ ತೀರ ಸಾವಕಾಶವಾಗಿ ಸಾಗುತ್ತಾ ಮಧ್ಯದ ಒಂದಿಷ್ಟು ಸ್ಥಳ ಬಿಟ್ಟು, ಅರ್ಧ ಪ್ರದಕ್ಷಿಣೆ ಹಾಕಿ ಮುಂದೆ ಸರಿಯುತ್ತಿದ್ದವು.

ಏನೆಂದು ತಿಳಿಯುವ ಕುತೂಹಲದಿಂದ ಪಕ್ಕಕ್ಕೆ ತಿರುಗಿದಾಗ ಒಬ್ಬ ಟ್ಯಾಕ್ಸಿ ಚಾಲಕ, ''ಕೋಯಿ ಸಾಲಾ ರಸ್ತೇ ಮೇ ಮರ್ ಗಯಾ ಹೈ'' ಎಂದ. ಒಮ್ಮೆಲೇ ಅಕ್ಕಪಕ್ಕದ ಸಹಕಾರಿಗರು ಅಸಹನೆಯಿಂದ,

"Stupid nuisance.''

''ಸಂಜೆ heavy traffic ಇರುವಾಗ ನಡು ರಸ್ತೆಯಲ್ಲಿ ಬಿದ್ದು ಸತ್ತರೇ ಪಬ್ಲಿಕ್‌ಗೆಷ್ಟು ತೊಂದರೆ, ಥೇ, useless'

''ಒಟ್ನಲ್ಲಿ ನಮ್ಮ ಜನಕ್ಕೆ common sense ಇಲ್ಲ''

''ಸಾಯುವ ಪುಣ್ಯಾತ್ಮ ಮನೆಯಲ್ಲಿ ಬಿದ್ದು ಸಾಯಬಾರದೇ?"

ಇತ್ಯಾದಿಯಾಗಿ ನಾನಾ ರೀತಿಯಲ್ಲಿ ಮೃತನ ಆತ್ಮಕ್ಕೆ ಶಾಂತಿ ಕೋರತೊಡಗಿದರು.

ನನಗೂ ವಿಪರೀತ ಕೋಪ ಬಂತು. ಯಾರೀತ ಸತ್ತಾತ ನೋಡಿಯೇ ಬಿಡುವ ಎಂದು ಕಾರನ್ನು ಪಕ್ಕಕ್ಕೆ ಜರುಗಿಸಿ ನೋಡಿದೆ.

ಯಾವನೋ ಒಬ್ಬ ಪ್ಯಾಂಟು ಬುಶ್ ಶರ್ಟು ಧರಿಸಿದ ಸುಮಾರು 30-35ರ ಯುವಕ, ಮುಂಬಯಿಯ ಅಸಂಖ್ಯಾತ ಕಾರಕೂನರಲ್ಲಿ ಒಬ್ಬ ರಸ್ತೆಯ ಮೇಲೆ ಕೈ ಕಾಲು ಪಸರಿಸಿ ರಕ್ತ ಸುರಿಸಿ ಧರಾಶಾಯಿಯಾಗಿ ''ಕಾರು-ಖೂನ''ನಾಗಿದ್ದ. ಕೈಯಲ್ಲಿನ ಬ್ರೀಫ್‌ಕೇಸು, ಭಗ್ನ ಕನ್ನಡಕ ಪಕ್ಕದಲ್ಲಿ ಬಿದ್ದಿದ್ದವು.

ನಾನು ಅಸಹನೆಯಿಂದ, ಕಾರಿಟ್ಟವರಿಗೆ ಮಾತ್ರ ಬರಬಹುದಾದ ದರ್ಪದಲ್ಲಿ.

''ಏ, ಯಾರೋ ನೀನು?" ಎಂದು ಕೇಳಿದೆ.

ಅವನೇನು ಕಡಿಮೆಯೇ? ಮುಂಬಯಿ ಮಹಾ ನಗರದ ಸಮಾಜವಾದಿ ಸುಶಿಕ್ಷಿತ ಹೆಣ.

"ನೋಡಿದರ ತಿಳಿಯೂದಿಲ್ಲೇನು? ನಾನೊಬ್ಬ ಹೆಣ." ಎಂದ ನನ್ನಷ್ಟೇ ದರ್ಪ ದಲ್ಲಿ.

"ಅದು ತಿಳೀತು. ಆದರ ಹೀಂಗ ಹೆಣ ಆಗೋಕಿಂತ ಮುಂಚೆ ಏನಿದ್ದಿ ನೀನು?" ಎಂದೆ ಸೋಲದೆಲೆ.

''ಸಾಯೋದರಕಿಂತ ಮೊದಲು ಸಹಿತ ನಾ ಹೆಣಾನs ಇದ್ದೆ," ಎಂದ.

ಇದೇಕೋ ಸರಿ ಹೋಗ್ಲಾ ಇಲ್ಲ ಎಂದುಕೊಂಡು ಹತಾಶತನದಲ್ಲಿ ಕೇಳಿದ.

"ಅಲ್ಲಪಾ ಸಾಯಾಂವ ಸತ್ತಿ. ಆದರ ಹೀಂಗ ನಡು ರಸ್ತೆದಾಗ ಯಾಕ ಬಿದ್ದು ಸತ್ತೀ?"

"ಮತ್ತೆಲ್ಲಿ ಸಾಯಬೇಕಾಗಿತ್ತು ಹೇಳು," ಎಂದ ಹೆಣರಾಯ.

"ಯಾಕ....ಫುಟ್‌ಪಾತ್ ಇತ್ತಲ್ಲ? ಮುನಸಿಪಾಲಟಿಯವರೂ, ಟೆಲಿಫೋನ ಡಿಪಾರ್ಟ್‌ಮೆಂಟಿನವರೂ. ಖಾಸ ನಿನ್ನಂತಹವರಿಗಾಗಿ ಎಷ್ಟು ದೊಡ್ಡ ದೊಡ್ಡ ಹಳ್ಳ ತೋಡಿರತಾರ ಗೊತ್ತಿಲ್ಲೇನು ನಿನಗ ?'' ಎಂದೆ.

''ಗೊತ್ತದ. ಆದರ ಪ್ರತಿಯೊಂದು ಹಳ್ಳದಾಗನೂ ಎರಡು ಮೂರು families ಮನಿ ಮಾಡಕೊಂಡು ಕೂತಿರತಾವ ವರ್ಷಗಟ್ಟಲೇ. ಅದು ಗೊತ್ತದ ಏನು ನಿನಗ? ಅಲ್ಲದೇ ಫುಟ್‌ಪಾತದ ಮ್ಯಾಲ ಆ ಭಿಕ್ಷುಕರೂ, ಹಾಕರ್ಸೂ ಇವರೆಲ್ಲಾ ಸಾಯೊಂವಗ ಜಗ ಕೊಡತಾರೇನು........'. ಎಂದ ಶವಪ್ಪ ಸಾತ್ವಿಕ ಸಂತಾಪದಲ್ಲಿ.

ವಾದಕ್ಕೇ ಇಳಿದ ಮೇಲೆ, ಏಕೆ ಹಿಂದೆ ಸರಿಯಬೇಕೆಂದು ನಾನೂ ಕೇಳಿದೆ ಹಠದಲ್ಲಿ:

''ಸರಿ. ಆದರ ಇನ್ನೊಂದೆರಡು ಹೆಜ್ಜಿ ಮುಂದೆ ಹೋಗಿದ್ದರ ಚೌಪಾಟೀ ಹತ್ತರ ಸಮುಂದ್ರ ಇತ್ತಲ್ಲ. ಸಮುದ್ರದಾಗ ಬಿದ್ದು ಸಾಯಬಾರದಿತ್ತೇನು?"

''ಬಹಳ ಶಾಣ್ಯಾ ಇದ್ದೀ ಅಂತ ತಿಳದೀ ಏನು? ಚೌಪಾಟೀ ಸಮುದ್ರಕ್ಕಂತs ಹೊರಟಿದ್ದೆ 'ಕ್ಯೂ' ದಾಗ", ಎಂದ ಪ್ರೇತ.

"ಕ್ಯೂದಾಗ!" ಎಂದೆ ಆಶ್ಚರ್ಯದಲ್ಲಿ.

''ಮತ್ತs....ಬರೇ ಕಾರಿಸಾಗ ಅಪ್ಪಾಡಿದರ ಹೆಂಗ ತಿಳೀಬೇಕು. ಮುಂಬಯಿದಾಗ ಒಂದ ಕಡಿಂದ ಇನ್ನೊಂದು ಕಡೆ ನಡೀತಾ ಹೋಗಬೇಕಾದರೆ ಕೂಡ ''ಕ್ಯೂ'' ದಾಗ ನಡೀಬೇಕಾಗತ ಗೊತ್ತಿಲ್ಲೇನು? ಅದಕ್ಕs ನಾನೂ ಚೌಪಾಟೀಗೆ 'ಕ್ಯೂ ದಾಗ ನಡೆದಿದ್ದೆ. ಒಂದೆಡೆ ಹೆಜ್ಜೆ ತಪ್ಪಿ ಮುಂದ ತೂಕ ತಪ್ಪಿ ಎಡವಿದೆ. ಆಗ ಮುಂದಿದ್ದವರೆಲ್ಲಾ ಕೋಪದಲ್ಲಿ "ಏ, 'ಕ್ಯೂ' ತಪ್ಪಿಸ್ತೀಯಾ?.... ಸಾಲಾ" ಎಂದವರೇ ಎತ್ತಿ ರಸ್ತೇಕ್ಕ ಒಗದರು. ಸಾಯಾಂವಗ ರಸ್ತೇ ಏನು. ಸಮುದ್ರ ಏನು ಅಂತ ರಸ್ತೇದಾಗ ಸತ್ತೆ," ಎಂದ ಪ್ರೇತವ.

"ಸರಿ. ತಿಳೀತು. ಆದರ ಈ ನಿನ್ನ ದರಿದ್ರ ಮುಖ ಅಳುಬುರುಕ ಮಾತು ಕೇಳಿದರ ಮದುವೆಯಾದವರ ಹಂಗ ಕಾಣತೀಯಲ್ಲ," ಎಂದೆ,

"ಮತ್ತs ಇಲ್ಲದಿದ್ದರೆ ಯಾಕ ಸಾಯುತಿದ್ದೆ?" ಕೇಳಿದ ಮೃತ.

''ಮದುವೆಯಾಗಿದ್ದರ ಎಂತಹದರ ಒಂದು ಮನೆ ಅಂತಿರಬೇಕಲ್ಲ? ಆ ಮನಿ ಒಳಗ ಯಾಕ ಬಿದ್ದು ಸಾಯಲಿಲ್ಲ?" ಕೇಳಿದೆ ನಾನು ವಕೀಲರಂತೆ.

"ಬಹಾಳ ಬುದ್ಧಿವಂತ ಅಂತ ತಿಳಕೊಂಡೀ ಏನು ? ಪ್ರಯತ್ನಿಸಿ ನೋಡು, ಮನ್ಯಾಗ ಹೇಣ್ತಿ ಸಾಯಲಿಕ್ಕರ ಬಿಡತಾಳೇನು?" ಎಂದ ಹೆಣಪ್ಪ.

ಅಷ್ಟರಲ್ಲಿ ಹಿಂದೆ ಮುಂದೆ, ಅಕ್ಕಪಕ್ಕದಲ್ಲಿ ನೂರಾರು ಕಾರುಗಳು ಹಾರ್ನ ತೊಡಗಿದವು. ನಾನು ಗೆಳೆಯನಿಂದ ಬೀಳ್ಕೊಂಡು ಮುಂದೆ ಸರಿದೆ.



ಕೊರವಂಜಿಯಿಂದ....

# ಗಾಳಿ ಬಂದಾಗ ತೂರಿಕೋ !

—ಬೀರಣ್ಣ

"ಸೀನಾ ! ಇನ್ನೆರಡು ಬೆಣ್ಣೆ ತೆಗೆದುಕೊಂಡು ಬಾ !"

"ಇದೋ, ಬಂದೆ ಸ್ವಾಮಿ ಎರಡು ನಿಮಿಷ ಪುರಸತ್ತು ಕೊಡಿ !"

"ಸಾಧ್ಯವಿಲ್ಲ, ಸಾಧ್ಯವಿಲ್ಲ! ಮೊದಲು ತಂದುಕೊಟ್ಟುಬಿಡು—ಸಾವಕಾಶವಾದರೆ ಮುಗಿದು ಹೋದೀತು!" ಬ್ರಹ್ಮೇಂದ್ರ ಭವನದ ಮೂರನೆಯ ಮಹಡಿಯಲ್ಲಿ ಸಡಗರವೋ ಸಡಗರ. ಎಂಟು ದಿವಸಗಳಿಂದ ಬೆಣ್ಣೆಯ ಮುಖವೇ ಕಾಣದಿದ್ದುದು ಈ ದಿನ ಬೆಣ್ಣೆ ಬಂದುಬಿಟ್ಟಿದ್ದಿತು. ಸರಿ, ಎಲ್ಲರೂ ಬೆಣ್ಣೆಯನ್ನು ಕೇಳುವವರೇ—ಖಾಲಿ ದೋಸೆಗೂ ಬೆಣ್ಣೆ, ಇಡ್ಲಿ ಸಾಂಬಾರಿಗೂ ಬೆಣ್ಣೆ, ಖಾರಾ ಬೂಂದಿಗೂ ಬೆಣ್ಣೆ, ಬಾಸುಂದಿ ಬಾದಾಮಿ ಹಾಲುಗಳಿಗಂತೂ ಎರಡೆರಡು ಬೆಣ್ಣೆ ! ಅದನ್ನು ಕಂಡರೆ ಅಸಹ್ಯಪಡುತ್ತಿದ್ದವರೂ ಕೂಡ ಸಿಕ್ಕಿದೆಯೆಂದು "ಒನ್ ಬೈ ಟು (one by two) ಖಾಲಿ ದೋಸೆ, ಮೂರು ಬೆಣ್ಣೆ !" ಎಂದು ಕೂಗಲಾರಂಭಿಸಿದ್ದರು. ಬ್ರಹ್ಮೇಂದ್ರ ಭವನದ ಮಾಲೀಕನು ಈ ಗಲಾಟೆಯಲ್ಲಿ ಬೆಣ್ಣೆಯ ಬೋಂಡಗಳ ಗಾತ್ರವನ್ನು ಅರ್ಧಕ್ಕಿಳಿಸಿ ಬೆಲೆಯನ್ನು ಎರಡರಷ್ಟು ಏರಿಸಿಬಿಟ್ಟನು. ಆದರೆ, ನಮ್ಮ ಮೂರನೆಯ ಮಹಡಿಯವರು ಇವಕ್ಕೆಲ್ಲಾ ಹೆದರುವವರೇ ಅಲ್ಲ.

"ನೋಡಿದೆಯಾ, ಭೀಮಣ್ಣ! ಈ ಬೆಣ್ಣೆಯ ಭರಾಟೆ!" ಎಂದೆ. ಕುಳ್ಳಪ್ಪನು "ಸದ್ಯ ಸಿಕ್ಕಿದೆಯಲ್ಲ, ಅದು ಹೇಳಿ. ಎಂಟು ದಿನಗಳಿಂದ ಅದಕ್ಕಾಗಿ ಹಂಬಲಿಸಿದ್ದೂ ಹಂಬಲಿಸಿದ್ದೆ" ಎಂದನು.

"ಇನ್ನೇನು, ಹತ್ತು ವರ್ಷಗಳ ಒಳಗಿರುವ ಹಸುಗಳನ್ನು ಕೊಲ್ಲಕೂಡದೆಂಬ ಕಟ್ಟಾಜ್ಞೆ ಬಂದುಬಿಟ್ಟಿದೆಯಲ್ಲ, ಹಾಲು ಬೆಣ್ಣೆಗಳಿಗೇನು ಕಡಿಮೆ?" ಎಂದು ಹಿಂದಿನಿಂದ ಯಾರೋ ಒದರಿದರು.

"ಹತ್ತು ವರ್ಷದ ಒಳಗಿನ ದನಗಳಿಗೇನು ಕಡಿಮೆ ಎಂದು ಹೇಳುವ ಹಾಗಿಲ್ಲ" ಎಂದು ಮತ್ತಾರೋ ಅಂದರು.

ಸದ್ದಿಲ್ಲದೆ ಬಾಸುಂದಿಗಳನ್ನು ಹೊಡೆಯುತ್ತಿದ್ದ ಗೋವಿಂದಸ್ವಾಮಿಯು "ಮುಂದೆ ಹೇಗಾದರೂ ಇರಲಿ, ಈಗ ಸಿಕ್ಕಿರುವಾಗ ಏಕೆ ಸಂಕೋಚಪಟ್ಟುಕೊಳ್ಳ

ಬೇಕು? ಗಾದೆ : ಗಾಳಿ ಬಂದಾಗ ತೂರಿಕೋ. ನೀತಿ : ಬೆಣ್ಣೆ ಸಿಕ್ಕಿದಾಗ ತಿಂದು ಕೋ!'' ಎಂದು ಹೇಳಿ ಮತ್ತೊಂದು ಲೋಟ ಬಾದಾಮಿ ಹಾಲು, ಎರಡಾಣೆ ಬೆಣ್ಣೆಗಳಿಗೆ ಹೇಳಿದನು.

ಭೀಮಣ್ಣನು ''ಗಾಳಿ ಬಂದಾಗ ತೂರಿಕೊ ಎಂಬುದು ಸತ್ಯದ ಮಾತು ನಮ್ಮ ದೊಡ್ಡಪ್ಪನ ಅಳಿಯನ ತಮ್ಮನ ಮಗ ಕಲ್ಲಪ್ಪನು ಈ ಗಾದೆಯನ್ನು ವೇದ ವಾಕ್ಯವೆಂದು ನಂಬಿ ಅಕ್ಷರತಃ ಅದರಂತೆ ನಡೆದುಕೊಂಡಿದ್ದರಿಂದಲೇ ಅಷ್ಟು ಉನ್ನತ ಸ್ಥಿತಿಗೆ ಬಂದದ್ದು...."

ಖಾಲಿದೋಸೆಯ ಕಪ್ಪಣ್ಣನು ''ಈ ಬೆಣ್ಣೆಯಲ್ಲಿ ಒಂದು ವಿಶೇಷ ನೋಡಿದಿರಾ''— ''ನಮ್ಮ ಕಲ್ಲಪ್ಪನ ಕತೆ ಕೇಳಬೇಕಾದುದು—ಅವನು ಮುಂದಕ್ಕೆ ಬಂದ ಬಗೆ ಎಲ್ಲರಿಗೂ ಒಂದು ಮೇಲ್ಪಂಕ್ತಿ ಎಂದರೇನು ಅತಿಶಯೋಕ್ತಿಯಲ್ಲ (ಎಂದು ಹೇಳತೊಡಗಿದನು ಭೀಮಣ್ಣ) ಅವನು ಹುಟ್ಟಿದುದು ಕೇವಲ ಬಡತನದಲ್ಲಿ. ಒಳ್ಳೆ ಮಳೆಗಾಲ, ಆಸರ್ತಿಯ ಬೇಸಗೆಯು ಬಹಳ ಉಗ್ರವಾಗಿದ್ದು ಜನರೆಲ್ಲರೂ ಮಳೆಗೋಸ್ಕರ ಹಾಹಾ ಕಾರಪಟ್ಟುಬಿಟ್ಟರು. ಮಳೆಯೂ ಬಂತು. ಬೇಸಾಯದ ಕೆಲಸವು ಭರದಿಂದ ಸಾಗಿತು. ಇದ್ದಕ್ಕಿದ್ದ ಮಧ್ಯ ಮಳೆಗಾಲದಲ್ಲಿ ಮಳೆಯೇ ನಿಂತುಹೋಯಿತು. ಮೋಡಗಳೆಲ್ಲಾ ಚದರಿ ಸೂರ್ಯನ ತಾಪವು ಬೇಸಿಗೆಯ ನಾಲ್ಕರಷ್ಟಾಯಿತು. ಪೈರೆಲ್ಲಾ ಒಣಗಿ ಹೋಯಿತು. ಎಲ್ಲರಿಗೂ ಆಶ್ಚರ್ಯ- ಕಾರಣವೇನಿರಬಹುದೆಂದು. ಕಂಡ ಕಂಡ ದೇವರಿಗೆಲ್ಲಾ ಮೊಸಲು ಕಟ್ಟಿದರು. ಏಕೆಂದರೆ ನಾಲ್ಕು ತಿಂಗಳು ಎಡ ಬಿಡದೆ ಒಂದೇ ಸಮನೆ ಹೊಯ್ಯುತ್ತಿದ್ದ ಮಧ್ಯ ಮಲೆನಾಡಿನಲ್ಲಿಯೂ ಸಹ ತುಂಬಿದ ಮಳೆಗಾಲದಲ್ಲಿ ಬೇಸಿಗೆಯ ಬಿಸಿಲು! ಕಡೆಗೆ ಕಾರಣವು ನಮ್ಮೂರಿನಲ್ಲಿ ಮಾತ್ರ ತಿಳಿಯಿತು—ಕಲ್ಲಪ್ಪನ ತಾಯಿಗೆ ಪ್ರಸವ ವೇದನೆಯು ಶುರುವಾಗಿದ್ದಿತು ! ನಾಲ್ಕು ದಿನ ವೇದನೆಯನ್ನನುಭವಿಸಿ ಐವತ್ತು ಮೈಲಿ ಸುತ್ತಿನಲ್ಲಿದ್ದ ವೈದ್ಯರು, ಸೂಲಗಿತ್ತಿ ಯರಿಗೆಲ್ಲಾ ಕಳವಳಪಡಿಸಿ. ಕಡೆಗೆ ಅರ್ಧ ಪ್ರಾಣ ಕೊಟ್ಟು ಆಕೆಯು ಈ ಸುಪುತ್ರನನ್ನು ಪಡೆದಳು. ಅವನು ಹುಟ್ಟಿದ ದಿನ ಅಗಾಧವಾದ ಮಿಂಚು, ಗುಡುಗು. ಭಾರಿ ಸಿಡಿಲು ಹೊಡೆದು ವರ್ಷಾಂತರಗಳಿಂದ ಇದ್ದ ಒಂದು ಅಶ್ವತ್ಥ ಮರವೂ ಅದರ ನೆರಳಿನಲ್ಲಿ ನಿಂತಿದ್ದ ಇಬ್ಬರು ಬ್ರಾಹ್ಮಣರೂ ಸುಟ್ಟು ಬೂದಿಯಾದರು!

ತಾಯಿಗೆ ಅಷ್ಟು ಕಷ್ಟವಾದರೂ ಮಗುವೇನೋ ಕಲ್ಲುಗುಂಡಿನ ಹಾಗೆ ಚೆನ್ನಾ ಗಿಯೇ ಇತ್ತು. ಅದರಿಂದಲೇ ಹಾಗೆಯೇ ಎಲ್ಲಾದರೂ ಕಲ್ಲುಗುಂಡಿನ ಹಾಗೆ ಬದುಕಿಕೊಳ್ಳಲಿ ಎಂದು, ಕಲ್ಲಪ್ಪ ಎಂದು ನಾಮಕರಣ ಮಾಡಿದರು. ಯಥಾ ಪ್ರಕಾರ ಜ್ಯೋಯಿಸರನ್ನು ಕರೆಯಿಸಿ ಜಾತಕ ಬರೆಸಿದರು. ನಮ್ಮ ಶುಂಠಯ್ಯನ

ಜಾತಕದಂತೆಯೇ ? (ನಮ್ಮ ತುಂಡ್ಯಪ್ಪನ ಕಥೆ ನಿಮಗೆ ಜ್ಞಾಪಕವಿರಬಹುದು—ಆ ದಿವಸ ಹೇಳಿದೆನಲ್ಲಾ. ಹಲ್ಲು ಚುಚ್ಚುವ ಕಡ್ಡಿ ಮಾರಿ ಹಣವಂತನಾದ ಶೂರ) ಇವನದೂ ಬಹಳ ಅಸಾಧಾರಣವಾದ ಜಾತಕವೆಂತಲೂ, ಚಂದ್ರಾದಿಯೋಗದ ದೆಸೆಯಿಂದ ಬಹಳ ದೊಡ್ಡ ಪದವಿಗೆ ಬರತಕ್ಕವನೆಂತಲೂ ಹೇಳಿದರು. ಆದರೇನೋ ಜೋಯಿಸರು ಗುಟ್ಟಾಗಿ ತಮ್ಮ ಮನೆಯಲ್ಲಿ ಇವನಿಗೆ ಕಾರಾಗೃಹವಾಸವೂ ಇದೆ ಎಂದು ಅವರ ಹೆಂಗಸರ ಸಂಗಡ ಹೇಳಿದರಂತೆ. ಅದರ ನಿಜಾರ್ಥ ನನಗೆ ತಿಳಿಯದು.

ಕಲ್ಲಪ್ಪನು ಕವಿಗಳು ಹೇಳುವಂತೆ ಬಾಲಚಂದ್ರನೋಪಾದಿಯಲ್ಲಿ ಬೆಳೆಯುತ್ತಾ ಬಂದನು. ಆದರೆ ಹಾಲಿನಂಥ ಬಿಳಿ ಚಂದ್ರನ ಸ್ಥಾನದಲ್ಲಿ ಸ್ವಲ್ಪ ಮಾಸಲು ಚಂದ್ರನನ್ನು ನೀವು ಊಹಿಸಿಕೊಳ್ಳಬೇಕು ಅಷ್ಟೆ. ಅವನ ಹೊರವಾದ ಬೆಳವಣಿಗೆಯನ್ನು ಕಂಡು ಅವನ ಒಡನಾಡಿಗಳೆಲ್ಲಾ ಪ್ರೀತಿಯಿಂದ "ಹೊಟ್ಟೆಗೊಡ್ಡ" ಎಂದು ಹೆಸರಿಟ್ಟರು. ಒಂದು ದಿನ ಇವನಿಗೆ ನಾಲ್ಕೈದು ವರ್ಷ ವಯಸ್ಸಾದಾಗ, ರೈತರು ಮೆದೆ ತುಳಿಸಿ ಪೈರನ್ನು ತೂರುತ್ತಿದ್ದುದನ್ನು ಕಂಡು ಅವನು ಅವರ ಅಪ್ಪನನ್ನು ಇದೇಕೆ ಹೀಗೆ ಮಾಡುತ್ತಿದ್ದಾರೆಂದು ಕೇಳಿದನು. ಅವನ ತಂದೆಯು ಅದರ ವಿಚಾರವನ್ನೆಲ್ಲಾ ತಿಳಿಸಿ "ನೋಡು, ಈಗಾಗಲೇ ರಾತ್ರಿ ಸಮಯವಾಗಿದೆ. ಆದರೂ ಈಗತಾನೆ ಗಾಳಿ ಎದ್ದಿರುವುದರಿಂದ ಕತ್ತಲಾಗುವ ಹಾಗಿದ್ದರೂ, ಈಗಲೇ ತೂರುತ್ತಿದಾರೆ. ಗಾಳಿ ಬಂದಾಗ ತೂರಿಕೋ ಬೇಕಪ್ಪಾ" ಎಂದನು. ಬಾಲಕನಾದ ಕಲ್ಲಪ್ಪನಿಗೆ ಇದು ಮನಸ್ಸಿನಲ್ಲಿ ಬಲವಾಗಿ ನಾಟಿತು.

ಮಾರನೆಯ ದಿನ ದೇವರ ನೈವೇದ್ಯಕ್ಕೆಂದು ಅವರ ತಾಯಿಯು ಹಣ್ಣು ಕಾಯಿಗಳನ್ನು ತರಿಸಿ ದೇವರ ಮುಂದಿಟ್ಟು ಸ್ನಾನಕ್ಕೆಂದು ಹೋದಳು. ಯಾವಾಗಲೂ ಎತ್ತರವಾದ ಒಡುವಿನ ಮೇಲಿರುತ್ತಿದ್ದ ತುಪ್ಪದ ಪಾತ್ರೆಯೂ, ಸಕ್ಕರೆ ಡಬ್ಬಿಯೂ ಕೆಳಗಿಡಲ್ಪಟ್ಟಿದ್ದುವು. ಕಲ್ಲಪ್ಪನು ನೋಡಿದನು. ಒಳ್ಳೆಯ ಸಮಯ ! ರಸವತ್ತಾದ ಹಣ್ಣನ್ನು ಸುಲಿದು ಸಕ್ಕರೆ ತುಪ್ಪಗಳಲ್ಲಿ ಅದ್ದಿ ನುಂಗಿದನು. ಕಾಯಿಯನ್ನು ಒಡೆದು ಎಳನೀರು ಕುಡಿದು, ಅದರ ಮೇಲೆ ಕಾಯಿ ಚೂರುಗಳನ್ನು ಅಗಿದನು. ತಾಯಿಯು ಬರುವ ವೇಳೆಗೆ ಸಿಪ್ಪೆ, ಚಿಪ್ಪು ಇವುಗಳು ಮಾತ್ರ ಉಳಿದಿದ್ದವು. ಅವಳು "ಇದೇನೋ ಮಗು, ಹೀಗೆ ಮಾಡಿದೆ? ದೇವರಿಗೆಂದು ತರಿಸಿದ್ದೆನಲ್ಲೋ!" ಎಂದಳು.

ಕಲ್ಲಪ್ಪನು 'ನೈವೇದ್ಯವಾದ ಮೇಲೆ ಬರೀ ಹಣ್ಣು ಮಾತ್ರ ಸ್ವಲ್ಪ ಸಿಕ್ಕುತ್ತಿತ್ತು. ಈಗ ಸಕ್ಕರೆ, ತುಪ್ಪ, ಕಾಯಿ, ಹಣ್ಣು ಎಲ್ಲಾ ಒಟ್ಟಿಗೆ ಇತ್ತು. ಅಪ್ಪ ಹೇಳಿಕೊಟ್ಟಿದಾನೆ—"ಗಾಳಿ ಬಂದಾಗ ತೂರಿಕೊ' ಎಂದು. ಆದ್ದರಿಂದ ಎಲ್ಲಾ ಒಟ್ಟಿಗೆ ಸಿಕ್ಕಿದಾಗ ಹೊಟ್ಟೆ ತುಂಬಿಕೊಂಡೆ" ಎಂದನು.

ಇವನ ಗ್ರಾಹ್ಯ ಶಕ್ತಿಯನ್ನು ಕಂಡು ಎಲ್ಲರಿಗೂ ಅತ್ಯಂತ ಆಶ್ಚರ್ಯವಾಯಿತು. ದೊಡ್ಡ ಓದನ್ನೇ ಓದಿಸಬೇಕೆಂದು ಶಾಲೆಗೆ ಹಾಕಿದರು. ಲೋಯರ್ ಸೆಕೆಂಡರಿ ಪರೀಕ್ಷೆಯಲ್ಲಿ ಗಣಿತದ ಪ್ರಶ್ನೆಗಳು ಎಷ್ಟು ತಲೆ ಕೆರೆದುಕೊಂಡರೂ ಬಗೆಹರಿಯಲಿಲ್ಲ. ಸುಮ್ಮನೆ ಕುಳಿತಿದ್ದು ಇನ್ನೇನು ಎದ್ದು ಬರಬೇಕೆಂದಿದ್ದನು. ಅಷ್ಟರಲ್ಲಿ ಇದ್ದಕ್ಕಿದ್ದ ಹಾಗೆ ದೊಡ್ಡ ಗಾಳಿ ಎದ್ದಿತು. ಮೇಜಿನ ಮೇಲೆ ಬರೆದು ಮುಗಿಸಿಕೊಟ್ಟಿದ್ದ ವಿದ್ಯಾರ್ಥಿಗಳ ಉತ್ತರದ ಕಾಗದಗಳೆಲ್ಲಾ ಇದ್ದವು. ಮೇಲೆ ಭಾರ ಯಾವುದೂ ಇರಲಿಲ್ಲವಾದ್ದರಿಂದ ಆ ಕಾಗದಗಳೆಲ್ಲಾ ಚೆಲ್ಲಾಪಿಲ್ಲಿಯಾಗಿ ಆ ದೊಡ್ಡ ಕೊಠಡಿಯ ಮೂಲೆ ಮೂಲೆಗೂ ಹರಡಿದವು. ಅಲ್ಲಿದ್ದ ಉಪಾಧ್ಯಾಯರುಗಳು ಅವುಗಳನ್ನು ಬೇಟೆಯಾಡತೊಡಗಿದರು. ಕಲ್ಲಪ್ಪನು ಕುಳಿತಿದ್ದ ಬಳಿಗೂ ಕೆಲವು ಕಾಗದಗಳು ಹಾರಿಬಂದವು. ಕಲ್ಲಪ್ಪನು ನೋಡಿದನು ನಾಲ್ಕು ಲೆಕ್ಕಗಳ ಉತ್ತರ ಸಿಕ್ಕಿತು. ಕಾಗದಗಳನ್ನು ತನ್ನ ಉತ್ತರಗಳೊಡನೆ ಸೇರಿಸಿದನು. ಉಪಾಧ್ಯಾಯರುಗಳು ಸಿಕ್ಕಿದ ಕಾಗದಗಳನ್ನೆಲ್ಲಾ ಶೇಖರಿಸಿ ಜಿಂಗಡಿಸಿಕೊಂಡರು. ಅದಾದ ಮೇಲೆ ಕಲ್ಲಪ್ಪನು ತನ್ನ ಉತ್ತರದ ಕಾಗದಗಳನ್ನು ಕೊಟ್ಟು ಹೊರಗೆ ಬಂದನು. ಗಾಳಿ ಬಂದು ಉತ್ತರಗಳು ತಮ್ಮಷ್ಟಕ್ಕೆ ತಾವೇ ಕಲ್ಲಪ್ಪನಿಗಾಗಿ ತೂರಿಕೊಂಡಿದ್ದವು— ತೇರ್ಗಡೆಯೇ ಆಗಿ ಹೋಯಿತು.

ಮೆಟ್ರಿಕ್ ಪರೀಕ್ಷೆಯಲ್ಲಿ ಆದ ವಿಚಿತ್ರವೇ ಬೇರೆ. ವಿಜ್ಞಾನ ಶಾಸ್ತ್ರದಲ್ಲಿ ಒಂದೇ ಹಾಳೆ ಬರೆದು ಮಿಕ್ಕಿದ್ದೆಲ್ಲಾ ಖಾಲಿ ಕೊಡಬೇಕಾಯಿತು. ಹೀಗಿದ್ದರೂ ಪ್ರಯೋಜನವಿಲ್ಲವೆಂದರಿತು ತನ್ನ ಅಂಕಿಯನ್ನು ಉತ್ತರದ ಪುಸ್ತಕದ ಮೇಲೆ ಬರಿಯದೆಯೇ ಹೊರಗೆ ಬಂದನು. ಅಲ್ಲಿಯೇ ನಿಂತು ಕೆಲವರ ಸಂಗಡ ಮಾತನಾಡುತ್ತಿದ್ದಾಗ ಒಳಗಿಂದ ಪರೀಕ್ಷೆಯ ಉಸ್ತುವಾರಿಯಲ್ಲಿದ್ದವರು ಹೊರಗೆ ಬಂದು ''ಯಾರೋ ಇಬ್ಬರು ವಿದ್ಯಾರ್ಥಿಗಳು ತಮ್ಮ ಅಂಕಿಗಳನ್ನು ಉತ್ತರದ ಪುಸ್ತಕಗಳ ಮೇಲೆ ಬರೆಯಲು ಮರೆತಿದ್ದಾರೆ: ಕೂಡಲೇ ಬಂದು ಅದನ್ನು ಸರಿಪಡಿಸಬೇಕು'' ಎಂದರು. ಕಲ್ಲಪ್ಪನು ''ನಾನು ಬರೆದ ಹಾಗೆ ಜ್ಞಾಪಕವಿಲ್ಲ ಬಂದು ನೋಡಲೇ'' ಎಂದನು.

''ನಿನ್ನ ಅಂಕಿ ಎಷ್ಟು?''

''[illegible]''

''ಹೌದು. ಅದು ಒಂದು. ಇನ್ನೊಬ್ಬನು ಯಾರು?''

"ಶಿಂಳಿನಯ ಅಂಕಿಯವನು ಇದ್ದಾನೆಯೆ?"

ಯಾತ್ಯಾರೂ ಮುಂದೆ ಬರಲಿಲ್ಲ. ಅವನು ಮನೆಗೆ ಹೊರಟುಹೋಗಿದ್ದನು ಕಲ್ಲಪ್ಪನನ್ನು "ಹೋಗಲಿ, ನೀನು ಬಂದು ನಿನ್ನ ಉತ್ತರದ ಮೇಲೆ ನಿನ್ನ ಅಂಕಿಯನ್ನು ಗುರುತಿಸು'' ಎಂದರು. ಕಲ್ಲಪ್ಪನಿಗೆ ತಂಗಾಳಿ ಬೀಸಿದಂತಾಯಿತು. ಹೋಗಿ

(54ನೇ ಪುಟ ನೋಡಿ)

# ಇದೇನನ್ಯಾಯ....?

— ಶಾಂತಾ ರಘು

ಜುಲೈ, ಭಾನುವಾರ 9ನೆಯ ತಾರೀಖು ಮಧುರೈಯಲ್ಲಿ ಮಾವನ ಮಗನ ಮದುವೆ. ಕಡ್ಡಾಯವಾಗಿ ಹೋಗಲೇಬೇಕಾದ ನಿರ್ಬಂಧ. ಬಲು ಅರ್ಜೆಂಟಾಗಿ ಹೋಗಿ ಅರ್ಜೆಂಟಾಗಿ ಹಿಂತಿರುಗಬೇಕಾದ ಪರಿಸ್ಥಿತಿ. ಸರಿ, ಆಪತ್ತಿಗೆ ದೋಷ ವಿಲ್ಲಾಂತ ಯಜಮಾನರು ಶನಿವಾರ ಮಧ್ಯಾಹ್ನದ ಪ್ಲೇನಿಗೆ ಎರಡು ಟಿಕೆಟ್ ಕೊಂಡರು. To and fro ಇಬ್ಬರಿಗೆ 1,700 ರೂ. ಅಂದಾಗ ಎದೆ ಝಲ್ಲೆಂದಿತು. ಅಯ್ಯೋ, hard earned ದುಡ್ಡಲ್ವೇ ? "ಸರಿ, ಸರಿ, ಅಂಬಲೀಗೂ ಆಸೆ ಮೀಸೇ ಮೇಲೂ ಆಸೇಂದ್ರೆ ಹ್ಯಾಗೆ ? ಪ್ಲೇನಿನಲ್ಲೂ ಹೋಗ್ಬೇಕು, ದುಡ್ಡೂ ಖರ್ಚಾಗಬಾರದೂಂದ್ರೆ ಆಗುತ್ಯೆ ? ಒರಳೊಳಗೆ ತಲೆ ಕೊಟ್ಟು ಒನಕೆ ಪೆಟ್ಟು ಒಲ್ಲೆ ಅಂದ್ರೆ? ಇಷ್ಟಕ್ಕೂ ನಾವೇನು ದಿನಾ ಪ್ಲೇನಿನಲ್ಲಿ ಹೋಗ್ತೀವೆ ? ಅಂತ ಹುಳ್ಳ ಗಾಗುತ್ತಿದ್ದ ಕಳ್ಳ ಮನಸ್ಸಿಗೆ ಸುಳ್ಳು ನೆವ ಹೇಳ್ತಾ ಶನಿವಾರ ಬೆಳಗ್ಗೆ 11 ಗಂಟೆಗೆ airportಗೆ ಹೋಗಿ ಇಳಿದ್ವಿ. ಗುಂಡಿಗೆ ಒಡೆದಂತಾಯ್ತು. ಬೋರ್ಡಿನಲ್ಲಿ 1C 579 to Madurai-Late-15.00 hrs. ಅಂತ ಹಾಕಿತ್ತು. ಅಯ್ಯಯ್ಯೋ, ಈಗಿನ್ನೂ 11 ಗಂಟೆ, ಇನ್ನೂ 4 ಗಂಟೆ ಕಾಯ್ಬೇಕೆ ? ಮನೆ ಯಿಂದಲೇ ಫೋನು ಮಾಡಿ ಕೇಳೋಣ ಅಂದ್ರೆ-airport ಫೋನು ಯಾರಿಗಾದರೂ ಯಾವತ್ತಾದರೂ ಸಿಕ್ಕಿದೆಯೆ ? ಈಗ ಮನೆಗೆ ಹೋಗಿ, ತಿರುಗಿ ಬರೋಣಾಂದ್ರೆ ಐವತ್ತೋ, ನೂರೋ ಖರ್ಚು. ಹುಶ್ಯಪ್ಪಾ-ಅಂತ ಕುಳಿತ್ವಿ.

ಆಚೆ ಈಚೆ ನೋಡ್ತಾ ಇದ್ದ ಹಾಗೆ, ಪ್ರಸಿದ್ಧ ಸಂಗೀತ ವಿದ್ವಾಂಸರಾದ T. V. ಶಂಕರನಾರಾಯಣನ್ ಅವರು, ತಂಬೂರಿ ಹಿಡಕೊಂಡು, ಪಕ್ಕವಾದ್ಯದವರ ಜತೆ ಈ ಕಡೇನೇ ಬರ್ತಾ ಇದ್ರು. ಮಧುರೈಯಲ್ಲಿ ಮಾವನ ಮಗನ ನಿಶ್ಚಿತಾರ್ಥಕ್ಕೆ ಆ ದಿನ ಸಾಯಂಕಾಲವೇ ಅವರ ಕಛೇರಿ ಇತ್ತು. ಪಾಪ, ಅವರಿಗೂ ನಮ್ಮದೇ ಪಾಡು. Airportಗೆ ಫೋನು ಮಾಡಿ, ಮಾಡಿ ಸಾಕಾಯ್ತಂತೆ. ಸರಿ, ನಮ್ಮವರ ಜತೆ ಅವರೂ counter ಹತ್ರ ಹೋದ್ರು. ಇಂಗ್ಲೀಷಿನಲ್ಲಿ "ಯಾಕೆ ಸರ್ ಈವತ್ತು ಇಷ್ಟು ಲೇಟು ಪ್ಲೇನು ? " ಅಂತ ವಿಚಾರಿಸಿದ್ರು. ಬಿಸ್ತಾಗಿ. ಕಟ್ಟು ಮಸ್ತಾಗಿ ಕೂತಿದ್ದ ಸಿಬ್ಬಂದಿ "ಯಾಕೆ ಸಾರ್? ಜಪಾನಿನಲ್ಲಿ ಪ್ಲೇನುಗಳು ಲೇಟಾಗಿ ಬರಲ್ವೆ ?" ಅಂದ್ರು. ನಮ್ಮವರು ಮತ್ತು T. V. S. ಮುಖ ಮುಖ ನೋಡ್ಕೊಂಡ್ರು. ಉತ್ತರ ಅರ್ಥ ಆಗ್ಲಿಲ್ಲ. ಪ್ರಶ್ನೆಗೂ, ಜಪಾನಿಗೂ ಏನು ಸಂಬಂಧ ? ನಮ್ಮವರು ಬಿಡಲಿಲ್ಲ.

"Excuse me, ಈ ತರ ಸಿಕ್ಕಾಪಟ್ಟೆ 3, 4 ಗಂಟೆ ಲೇಟಾಗೋದೂಂದ್ರೆ ಏನು ? At least ಎಷ್ಟುಪಯಾಂತ ಹೇಳಿ" ಅಂದ್ರು.

"Sorry, Sir, ಈ Boeingಉ, ಡೆಲ್ಲಿಯಿಂದ ಬಾಂಬೆಗ ಬಂದು, ಬಾಂಬೆಯಿಂದ ಬೆಂಗಳೂರು, ಬೆಂಗಳೂರಿಂದ ಮಧುರೈ, ಮಧುರೈಯಿಂದ ಬೆಂಗಳೂರು. ಬೆಂಗಳೂರಿಂದ ಗೋವಾ-ಇಷ್ಟು ಓಡಾಡ್ಬೇಕು. ಈಗಿನ್ನೂ ಡೆಲ್ಲಿಯಿಂದ ಹೊರಟಿದ್ಯೋ ಇಲ್ವೋ ಗೊತ್ತಾಗ್ಲಿಲ್ಲ." ಅಂತ ಒಂದೇ ಉಸುರಿಗೆ ಹೇಳಿ, ಬೆವರೊರಸಿಕೊಂಡರು. ಸುಸ್ತಾಗಿ ಸೀಟಿಗೆ ಬಂದು ಕೂತ್ವಿ. ಎಲ್ಲೋ shuttle service ಇರ್ಬೇಕು. ಬೋಯಿಂಗಿಗೂ ಬರಗಾಲ ಬಂತೆ ?

ಗಂಟೆ ಇನ್ನೂ 11-30. T.V.S. ಅವರ ಜತೆ ಸ್ವಾರಸ್ಯವಾಗಿ ಸಂಗೀತದ ವಿಚಾರ ವಿನಿಮಯ ನಡೀತು. 1/2 ಗಂಟೆ ಆದ್ಮೇಲೆ ಸುಮ್ಮನೆ ಆಚೆ ಈಚೆ ನೋಡ್ತಾ ಕೂತ್ವಿ. ಬಾಕಿ ಸಮಯದಲ್ಲಿ observe ಮಾಡ್ದೇ ಇರೋ ಚಿಕ್ಕ ಪುಟ್ಟ ವಿಷಯಾನೆಲ್ಲಾ ಮಾಡೋಕೆ ಕೆಲಸ ಇಲ್ದೆ ಸುಮ್ಮನೆ ಕೂತಾಗ ಗಮನಿಸ್ತೀವಿ ಅಲ್ವೆ ? ಸುತ್ತಲೂ ಯಾಪಾಟಿ ಜನ ! ಭಾರತ ನಿಜವಾಗಿಯೂ ಬಡದೇಶವೆ ? ! ನಮ್ಮ ಸುಭಾಷ್‌ನಗರದ ಬಸ್ ಸ್ಟಾಂಡಿಗಿಂತ ಹತ್ತರಷ್ಟು ಜನ ನಿಂತು, ಕೂತು, ಓಡಾಡ್ತಾ ಇದ್ರು. ಅದೇನೋ ಎಲ್ಲರ ಮುಖದ ಮೇಲೂ ಬೇಜಾರು, ಆತಂಕ, ಸಿಟ್ಟು. ಎಲ್ಲಾರಿಗೂ ಅನಾನುಕೂಲ. ಎಲ್ಲಾ ಪ್ಲೇನೂ ಲೇಟು.

ಕೆಲವರು ಪುಣ್ಯಾತ್ಮರು "Dip, dip, dip" ಅಂತ Deccan Herald ನವರು ಜಾಹಿರಾತು ಮಾಡಿದ್ದ luggage ಗಾಡಿಗಳನ್ನು ಎಳಕೊಂಡು ಅವುಗಳ ಮೇಲೆ ಕಾಲು ನೀಡಿಕೊಂಡು ಸುಖ ನಿದ್ರೆ ಮಾಡ್ತಾ ಇದ್ರು. ಕಿರ್ರನೆ ಕಿರಲುತ್ತಿದ್ದ ಕೂಸುಗಳು. ಸಿಡುಕುತ್ತಿದ್ದ ತಾಯಂದಿರು. 7-8 ಹುಡುಗರು luggage ಗಾಡೀನ ತಳ್ಳಿಕೊಂಡು ಕಾರಾಟ ಆಡ್ತಾ ಇದ್ರು. ತರಹಾವರಿ ಮಾತುಕತೆಗಳು.

"ಡ್ಯಾಡಿ ! ಡ್ಯಾಡಿ ! ಸ್‌ಚಕ್ ಅಂದ್ರೇನು ?"
''ಸ್‌ಚಕ್ ! ಏನೋ ಹಾಗಂದ್ರೆ ?
"ಅಲ್ನೋಡು ಬೋರ್ಡ್ ಮೇಲೆ SCHK ! ''
''ಅಯ್ಯೋ ಮಂಕೆ ! Security check ಕಣೋ !"
''ಅಣ್ಣಾ ! ನಾನವತ್ತೇ ಹೇಳಲಿಲ್ವೆ ? ಮಂಗಳೂರಿಗೆ ಬಸ್ನಲ್ಲೇ ಹೋಗ್ಬಿಡೋಣಾಂತ ? ಈಗ್ನೋಡು !''
'' ಸುಮ್ನೆ ಕೂತ್ಕೊಳ್ಳೊ ! ತಲೆ ಎಲ್ಲಾ ಹರಟ್ತಾನೆ !''

12 ಗಂಟೆ, ದೊಡ್ಡ ದೊಡ್ಡ ಪರಕೆ ಹಿಡಕೊಂಡು ಹತ್ತಾರು ಜನ ಕಸ ಗುಡಿಸುತ್ತಾ ಇದ್ದರು. ಅಯ್ಯೋ ! ಎಷ್ಟು ಗಲೀಜು ! ಪರಕಲು ಪೇಪರು, ಪ್ಲಾಸ್ಟಿಕ್ ಬ್ಯಾಗುಗಳು, ಕಡಲೆಕಾಯಿ ಬೀಜ, ಬಾಳೆಹಣ್ಣಿನ ಸಿಪ್ಪೆ ಯಾವ ಕೊಂಪೆ ಬಸ್ ಸ್ಟ್ಯಾಂಡಿಗಿಂತ ಬೇಡಾಗಿತ್ತಲ್ಲಿ ಓಡಾಡೋ ನೂರಾರು ಜನರ ಕೈಕಾಲಿಗೆ ತಗಲೋ ಹಾಗೆ ಪರಕೆ ಬೀಸಿಕೊಂಡು ಆಚೆ ಈಚೆ ಗುಡಿಸೋ ಭರಾಟೇನೋ ! 7 Flightಗಳು ಪ್ರಾರಂಭವಾಗೋ ಮುಂಚೇನೇ ಮುಂಜಾನೆಯೇ ಈ ಕೆಲಸ ಮಾಡಿಸಬಾರದೇ Indian Airlines ನವರು ? ಎಲ್ಲೆಲ್ಲೂ ಅದೇನು ನೊಣ ! ಅದೇನು ನೊಣ . ಕೋಟಿಗಟ್ಟಲೆ ಹಣ ಮಾಡುವವರಿಗೆ ಲೋಷನ್ ಕೊಳ್ಳಲು ದುಡ್ಡಿಲ್ವೆ ? ಅಥವಾ! ಬೋರು ಹೊಡಕೊಂಡು ಕಾಯ್ತಾ ಕೂತಿಗೋ ಪ್ರಯಾಣಿಕರು. ನೊಣಾನಾದ್ರೂ ಹೊಡೀತಾ ಕೂತಿರಲಿ—ಎಂದೇನಾದರೂ ideaನೆ ?

ಗಂಟೆ ಒಂದು. ನಮ್ಮ ಬೋಯಿಂಗಿನ whereabouts ಯಾರಿಗೂ ತಿಳಿದೇ ಇಲ್ಲ ಇನ್ನೂ. ಊಟಾನಾದ್ರೂ ಮಾಡೋಣ, Indian Airlinesನವರು free lunch ಕೊಡ್ತಾರಲ್ಲ ಅಂತ restaurant ಕಡೆ ಕಾಲೆಳೆದುಕೊಂಡು ಹೋದ್ವಿ. ಎಲ್ಲಾ ಟೇಬಲ್ ಮುಂದೇನೂ ಹರಳೆಣ್ಣೆ ಮುಖ ಮಾಡ್ಕೊಂಡು ಸುಮಾರು ಜನ ಕೂತಿದ್ರು. ನಾವೂ ಕುಳಿತೆವು....... ಕುಳಿತೆವು... .... ಕಪ್ಪು ಬಿಳಿ ಯೂನಿಫಾರಂ ಹಾಕ್ಕೊಂಡು ಪೆಂಗ್ವಿನ್‌ಗಳ ತರಹ ಆಚೆ ಈಚೆ ಓಡಾಡ್ತಿದ್ದ ಬೇರರ್ ಗಳ ಕಣ್ಣಿಗೆ ನಾವು ಬೀಳಲೇ ಇಲ್ಲ. 25 ನಿಮಿಷ ಆಯ್ತು 'ಕಾಳಿದಾಸ ಬಾಳಿಯಾನು' ಅಂತ ಕೂತೇ ಇದ್ವಿ ಮತ್ತೈದು ನಿಮಿಷಕ್ಕೆ ನಮ್ಮವರು ಎದ್ದು ನಮ್ಮ ಮುಂದೆಯೇ ಹಾದು ಹೋಗುತ್ತಿದ್ದ ಬೇರರ್ ಒಬ್ಬನನ್ನು ಗಕ್ಕನೆ ಹಿಡಿದು ''ಹಲೋ! ಹಲೋ! ಮಿಸ್ಟರ್! ಲಂಚ್ ಕೊಡ್ತೀರಾ ?" ಅಂತ ಕೂಗಿದರು. "ಎಸ್ ಸರ್" ಅಂತ ಹೇಳಿ ಹೋದವನು ಮತ್ತೆ 20 ನಿಮಿಷ ನಮ್ಮ ಕಡೆ ಬರುವ ತಪ್ಪು ಮಾಡಲಿಲ್ಲ. ಅಷ್ಟು ಹೊತ್ತಿಗೆ ನಮಗೂ ಒಂದು ತರಹ ಕೆಟ್ಟ ಮೊಂಡು ಹಟ ಬಂದಿತ್ತು. ಇಲ್ಲಿ ಕೂತು ಏನಾದರೂ ತಿಂದೇ ಹೋಗೋದು ಅಂತ. ನಮ್ಮವರು ಇನ್ನೊಬ್ಬನನ್ನು ಹಿಡಿದ್ರು ''ಏನ್ರಿ, ಒಂದು ಗಂಟೆಯಿಂದ ಕೂತಿದೀವಿ. ಏನೂ ಊಟ ಇಲ್ವ ?'' ಅಂತ ಕೋಪ ಮಾಡಿಕೊಂಡ್ರು. ಅವನು ಆಕಾಶ ಭೂಮಿ ನೋಡಿ ಮೆಲ್ಲಗೆ ಒಳಗೆ ಹೋದ. ಎರಡೇ ನಿಮಿಷದಲ್ಲಿ ಊಟ ಬಂತು ! ಅಬ್ಬಾ ! ಸದ್ಯ ಅಂತ ನೆಟ್ಟಗೆ ಕೂತೆವು. ತಟ್ಟೆ ನೋಡಿದೆವು, ಪ್ಲೇಟ್ ತುಂಬ ಬರೀ ಅನ್ನ—ಲೋಟದಲ್ಲಿ ನೀರು—ಬಟ್ಟಲು ತುಂಬಾ —ನಂಬಿ—ಟೊಮೇಟೋ sauce ! ಬೇರರ್‌ನ ನೋಡಿದೆವು. ಅವನೆಲ್ಲೋ ನೋಡ್ತಾ—''ಸಾರಿ ಸರ್. ಊಟ ಎಲ್ಲಾ ಮುಗಿದು ಹೋಗಿದೆ. ಇವತ್ತು ಎಲ್ಲಾ ಪ್ಲೇನೂ ಲೇಟು. ರಷ್ ಜಾಸ್ತಿ. ಅದಕ್ಕೇ........ ಅಂತ ಎಳೆದ. ಎಷ್ಟೋ ಹೊಟ್ಟೆ ತಾಳ ಹಾಕ್ತಾ ಇದ್ರೂ, ಅನ್ನಕ್ಕೇ ಟೊಮೇಟೋ sauce ಕಲಸಿಕೊಂಡು ತಿನ್ನುವ

ನ ದಪಷ್ಟಿಗೆ ಇಳಿಯಲು ನಾವು ತಯಾರಿರಲಿಲ್ಲ. ನೀರು ಕುಡಿದು ಎದ್ದೆವು. ''ಚಿಪ್ಸ್ ಬೇಕಾದ್ರೆ ತರಲಾ ಸರ್ ?'' ಅಂತ ಅಪರಾಧಿಯ ತರಹ ಕೇಳ್ತಾ ಇದ್ದ ಬೇರರ್. ಕೆಳಗಿಳಿದೆವು. ಅಲ್ಲೇ ಯಾವುದೋ ಕ್ಯಾಂಟೀನ್ ಇತ್ತು. ವಿಪರೀತ ಗುಜಗುಂಪಲು. ಎಲ್ರೂ ಗಬಗಬ ತಿಂಡಿ ತಿನ್ತಾ ಇದ್ರು. ನಾವೂ ಚೆನ್ನಾಗಿ ದುಡ್ಡು ಕೊಟ್ಟು ಚೆನ್ನಾಗಿ ತಿಂದೆವು. ಪಕ್ಕದಲ್ಲೇ ಬಾಳೆಹಣ್ಣು ತಿನ್ತಾ ಇದ್ದ ಸಫಾರಿ ಸೂಟಿನವರು ''ನಂಗ್ಯಾಕೋ ಅನುಮಾನ ಸಾರ್. ಕ್ಯಾಂಟೀನ್‌ನವನೇನಾದ್ರೂ ರೆಸ್ಟೋರಾಂಟ್‌ನವನಿಗೆ 'ನೀನು ಎಲ್ರನ್ನೂ ಉಪವಾಸ ಕಳಿಸು. ನಂಗೆ ಚೆನ್ನಾಗಿ ವ್ಯಾಪಾರ ಆಗತ್ತೆ. ನಿಂಗೆ ಕಮೀಷನ್ ಕೊಡ್ತೀನಿ' ಅಂತ ಹೇಳಿರಬಹುದೆ ?'' ಅಂತ ಜೋರಾಗೇ ಬೇಜಾರು ಮಾಡಿಕೋತಾ ಇದ್ದರು.

ವಾಪ್ಸು ಸೀಟಿಗೆ ಹಿಂತಿರುಗಿದೆವು. ಬೋರ್ಡಿನ ಮೇಲೆ IC 404 Delhi—15.00 hrs. IC 536 Madras-15.30 hrs. I C 523 Goa-16 30 hrs. I C 579 Madurai 17 00 hrs. ಅಂತ ಇತ್ತು! ಹಾಯ್! 3 ಗಂಟೆಯಿಂದ 5 ಗಂಟೆಯೆ? ಸರಿ ತಲೆ ಮೇಲೆ ಪ್ರವಾಹ ಒಂದಡಿ ಹೋದರೇನು, ಹತ್ತಡಿ ಹೋದರೇನು? ಅಂತ resigned ಆಗಿ ಕೂತೆವು. ದೆಹಲಿ counter ಮುಂದೆ ಕ್ಯೂ ಉ....ದ್ದಕ್ಕೆ ನಿಂತಿತ್ತು. ನಾನೂ ನೂರಾರು ಬಸ್ ಸ್ಟ್ಯಾಂಡುಗಳು, ರೈಲ್ವೆ ಸ್ಟೇಷನ್‌ಗಳು ನೋಡಿದ್ರೂ—ಅಲ್ಲಿನ ಬಡವ ಪ್ರಯಾಣಿಕನ ಮೋರೆಯ ಮೇಲೂ ಈಗ ನನ್ನ ಮುಂದಿದ್ದವರ ತರಹ ಬೇಸರ, ಆಯಾಸ, ಚಡಪಡಿಕೆ, ಖಂಡಿತ ಇರಲಿಲ್ಲಾಂತಾನೇ ನನ್ನ ನೆನಪು. ಸಾವಿರಾರು ರೂಪಾಯಿ ತೆತ್ತು, ಬೆಳಗ್ಗೆಯಿಂದ ಸಂಜೆ ತನಕ ನಾನಾ ತರಹದ ಕಷ್ಟ ಅನುಭವಿಸಿದ ಹೊಟ್ಟೆ ಉರಿಯೆ ?

ಈ ನಡುವೆ ಬಾಂಬಿನ ಬೆದರಿಕೆ ಅಂತ take off ಆಗೋ timeನಲ್ಲಿ ವಿಮಾನಕ್ಕೆ ಬ್ರೇಕ್ ಹಾಕಿಸಿ, ಪ್ರಯಾಣಿಕರನ್ನೆಲ್ಲಾ ಇಳಿಸಿ, ಶೋಧನೆ ಆದ ಮೇಲೆ ಎಷ್ಟೋ ಘಂಟೆ ಲೇಟಾದ ಮೇಲೆ ವಿಮಾನ ಹೊರಟಿತು ಅಂತ ದಿನಾ ಪೇಪರಿನಲ್ಲಿ ಬರತ್ತಲ್ಲ. ಇದನ್ನು ಓದಿ. ತಿರುವನಂತಪುರದ Air India ವಿಮಾನ ಒಂದರಲ್ಲಿ ಪತ್ತೆಬಾರದಿದ್ದ ಪ್ರಯಾಣಿಕ ಒಬ್ಬರು ಹತ್ತಿಬಿಟ್ಟರು. ಅವರನ್ನು ಹಿಡಿಯೋ ತನಕ ವಿಮಾನದಲ್ಲಿದ್ದ 200 ಪ್ರಯಾಣಿಕರನ್ನೂ ಹೊರಗೆ ಹೊರಡಿಸಿ, ಒಂದು ಹೋಟಲಿನಲ್ಲಿ 20 ಗಂಟೆಗಳ ಕಾಲ ಇಟ್ಟರು. ''ಆತನನ್ನು ಜೀವಸಹಿತವಾಗೋ, ಹೆಣವಾಗೋ ಹಿಡಿದು ಕೊಡುವವರಿಗೆ ಪುರಸ್ಕಾರ" ಅಂತ ಬೇರೆ ವಿಮಾನ ಅಧಿಕಾರಿಗಳು bulletin ಹೊರಡಿಸಿದರು. ಅಷ್ಟು ಬೇಜಾರು ಮಾಡಿದ ಪ್ರಯಾಣಿಕ ಒಂದು ಸುಂಡಿಲಿ ! ಬಾಹ್ಯಾಕಾಶಕ್ಕೆಲ್ಲಾ ಸುಂಡಿಲಿಗಳನ್ನ ಕಳಿಸ್ತಾ ಇರೋವಾಗ ವಿಮಾನದೊಳಗೆ ಅವಕ್ಕೆ ತಡ ಯಾಕೆ? ಪ್ರಯಾಣಿಕರು ಹೆದರ್ತಾರೆ ಅಂತಾನೆ? ಏನೀಗ, ವಿಮಾನ ಸಂಸ್ಥೆಗಳೂ

ಆಗಾಗ್ಗೆ ವಿಮಾನಗಳಲ್ಲಿ ಸುಂಡಿಲಿ, ಹೆಗ್ಗಣ, ಹಂದಿ, ಹಾಗೆ ಮುಂತಾದುವುಗಳನ್ನು ಕರೆದುಕೊಂಡು ಹೋದರೆ ಪ್ರಯಾಣಿಕರಿಗೆ ಪೇವರಿಕೆ ಹೋಗತ್ತೆ, ವಿಮಾನಗಳು ತಡವಾಗಿ ಹೊರಡ್ಗೋದು ತಪ್ಪತ್ತೆ. ಹೋಟಲ್ ಖರ್ಚೂ ಉಳಿತಾಯವಾಗತ್ತೆ. ಅಲ್ವೆ ? ಹೇಗೂ ವಿಮಾನಯಾನಿಗಳಿಗೆ ನೊಣ, ಜಿರಲೆಗಳ ಜತೆ ಪ್ರಯಾಣ ಮಾಡಿ ಅಭ್ಯಾಸ ಆಗಿದೆಯಲ್ಲ !

ದೆಹಲಿಯ ಗುಂಪು ಹೋಗಿ, ಮದರಾಸಿನವರು departure lounge ನಲ್ಲಿದ್ದರು. ಗೋವಾದವರು ರೆಡಿಯಾಗುತ್ತಿದ್ದರು. ಬೋರ್ಡಿಂಗ ಮೇಲೆ Bon voyage ಅನ್ನೋ ವಾಕ್ಯ ನಮ್ಮನ್ನು ಅಣಕಿಸುತ್ತಿತ್ತು. ಪಾಪಿಗಳು ನಾವೇ ಕೂತಿದ್ದೆವು.

ಯಾವಾಗಲೋ ಆಷಾಢಕ್ಕೊಮ್ಮೆ, ಅಮಾವಾಸ್ಯೆಗೊಮ್ಮೆ ಸುಖ ಪ್ರಯಾಣ ಬಯಸಿದ್ದಕ್ಕೆ ಈ ಪಾಡು ಪಡಬೇಕೆ ? ಅಂತೂ ಸಂಜೆ 5ಕ್ಕೆ ಹೊರಟೆವು. ಮನೆ ಬಿಟ್ಟು 7 ಗಂಟೆ ಹೊತ್ತಾಗಿತ್ತು. ನಮ್ಮ ಜತೆಗೇ ನೂರಾರು ನೊಣಗಳೂ ಪ್ರಯಾಣ ಮಾಡಿ ಸುಖವಾಗಿ ಮಧುರೈ ತಲುಪಿದುವು. ಗಂಭೀರವಾಗಿ ರೈಲು. ಬಸ್ಸುಗಳಲ್ಲಿ ಪ್ರಯಾಣ ಮಾಡಿದ್ದ ನೆಂಟರಿಷ್ಟರು ಯಾವಾಗಲೋ ಮದುವೆ ಮನೆ ತಲುಪಿ ಆರಾಮಾಗಿ ಕೂತಿದ್ದರು. ಮಾಮನ ಮಗಳು "ಏನೇ ? How was the flight ?" ಅಂತ ಬೇರೆ ಕೇಳಿ ಹೊಟ್ಟೆ ಉರಿಸಿದಳು.

Indian Airlinesಗೆ ನನ್ನ ವಿನಮ್ರ, ವಿನಯದ ವಿನಂತಿ ಇಷ್ಟೆ :

1. ಪ್ರಯಾಣಿಕರು plane timings ತಿಳಿಯಲು airport ತುಂಬಾ ಡಜನ್ ಗಟ್ಟಲೆ ಸರಿಯಾಗಿ ಕೆಲಸಮಾಡೋ ಟೆಲಿಫೋನುಗಳು ಇರಲೇಬೇಕು.

2. ಕಸ ಗುಡಿಸುವ ಮಹತ್ಕಾರ್ಯಕ್ರಮವನ್ನು ಮುಂಜಾನೆಯೇ ಮುಗಿಸಬೇಕು.

3. ಕಾದು ಕೂತ ಪ್ರಯಾಣಿಕರಿಗೆ videoಗಳಲ್ಲಿ ಒಳ್ಳೆಯ ಸಿನಿಮಾ ತೋರಿಸುತ್ತಾ ಇರಬೇಕು. ಕೆಲಸಕ್ಕೆ ಬಾರದ commercials ಬೇಡ.

4. ಹಸಿದ ಪ್ರಯಾಣಿಕರಿಗೆ ಕಡ್ಡಾಯವಾಗಿ ಹೊಟ್ಟೆ ತುಂಬಾ free lunch ಕೊಡಲೇಬೇಕು. ಟೊಮೇಟೋ sauceಗಿಂತ ಸಾಂಬಾರು ಉತ್ತಮ.

5. ಸಾವಿರಾರು Dettol ಬಾಟಲು ತರಿಸಿ airport ತುಂಬಾ ಸಿಂಪಡಿಸುತ್ತಲೇ ಇರಬೇಕು. ಪ್ರಯಾಣಿಕರಿಗೆ ನೊಣಗಳ ಸಂಗ ಬೇಕಿಲ್ಲ.

6. ಪ್ಲೇನುಗಳು ಯದ್ವಾ ತದ್ವಾ ಲೇಟೆಂದರೆ ಪ್ರಯಾಣಿಕರು ತಂತಮ್ಮ ಮನೆಗಳಿಗೆ ಹೋಗಿ ಬರಲು ಉಚಿತ ವಾಹನ ಸೌಕರ್ಯ ಮಾಡಿಕೊಡಲೇ ಬೇಕು.

"ಸ್ಸ....ರಿ, ಸ್ಸ....ರಿ, ಇಂಡಿಯಾದ 80 ಕೋಟಿ ಜನರಲ್ಲಿ ಒಂದು ಪರ್ಸೆಂಟೋ, ಅರ್ಧ ಪರ್ಸೆಂಟೊ, ವಿಮಾನ ಯಾನ ಮಾಡ್ತಾರೇನೋ? 40 ಕೋಟಿ ಜನರಿಗೆ ಒಪ್ಪೊತ್ತಿಗೂ ಗಂಜಿ ಇಲ್ಲ. ಅರೆವಾಸಿ ಉದ್ಯೋಗಾನೂ ಇಲ್ಲ. ಎಲ್ಲಾ ಕಡೆ ದಾರಿದ್ರ್ಯ, ನಿರುದ್ಯೋಗ, ರೋಗರುಜಿನ ತಾಂಡವ ಆಡ್ತಾ ಇರೋವಾಗ, ನಾಲಕ್ಕು ಮೇಲು ವರ್ಗದ ಜನ ಓಡಾಡೋ ವಿಮಾನ ಅದು ನಿಲ್ಲೋ ನಿಲ್ದಾಣ ಹೇಗಿದ್ದರೇನು ?" ಅಂತ ಎಷ್ಟೋ ಜನ ಓದುಗರು ಮೂಗು ಮುರಿದರೆ, ಖಂಡಿತ ಶೇ. 100ರಷ್ಟು ಸರಿಯೇ. ಒಪ್ಪಿದೆ. ಆದರೂ.... ಸರ್ಕಾರಿ ನೌಕರಿಯಲ್ಲಿರೋ ತೆರಿಗೆದಾರನ ಹೊಟ್ಟೆ ಉರಿಯುತ್ತಲ್ಲ....



---

## ಅಪ್ಪ, ಮಗ

ಬಚ್ಚಲು ಮನೆ ಗಂಗಾಳದಲ್ಲಿ
ಅಪ್ಪ ಮರೆತ ಹೊಸ ಹಲ್ಲು ಸ್ವತಂತ್ರವಾಗಿ
ಹಲ್ಲು ಕಿರಿಯಿತು
ನಾನು ನೋಡಿದೆ

ಎ. ಕೆ. ರಾಮಾನುಜನ್

---

# ಹಸಿರು ಕ್ರಾಂತಿ

— ಎ. ಎಸ್. ಚಂದ್ರಪ್ರಭ

'ಗಿಡ ನೆಡಿ', 'ಕಾಡಿನಿಂದಲೇ ನಾಡು, ನಾಡಿನಿಂದಲೇ ಬೀಡು', 'ಪ್ರತಿ ಮನೆಗೂ ಒಂದು ಮರ', 'ಮರವನ್ನು ನಿಮ್ಮ ಮಗುವಿನಂತೆ ಬೆಳೆಸಿರಿ' ಇತ್ಯಾದಿ ಘೋಷಣೆಗಳನ್ನು ನಮ್ಮ ಕೇಂದ್ರದ ಪ್ರಸಾರದಲ್ಲಿ ನೋಡಿ, ಕೇಳಿ, ನನಗೂ ನಮ್ಮ ಬರಡು ಅಂಗಳ ನೋಡಿದಾಗೆಲ್ಲ ಒಂದು ರೀತಿ guilty feeling ಬರುತ್ತಿತ್ತು. ಕೊನೆಗೊಮ್ಮೆ ನಾನೂ ಗಿಡ ನೆಡುವ ನಿರ್ಧಾರ ತೆಗೆದುಕೊಂಡು, ನನ್ನವರ ಮುಂದೆ ಹೇಳಿದಾಗ,

'ಓಹೋ ಧಾರಾಳವಾಗಿ ನೆಡು. ಮನೆಯ ಸುತ್ತ ಹಸಿರು ಇರುತ್ತದೆ. ನಿನ್ನ ಸುತ್ತೂ ಸ್ವಲ್ಪ ಕಮ್ಮಿಯಾಗಬಹುದು' ಅಂದಾಗ.

'ಎಲಾ ಎಲಾ ಈ ಪಾಯಿಂಟ್ ನನಗೆ ಹೊಳೆದೇ ಇರಲಿಲ್ಲವಲ್ಲ. ಒಂದೇ ಏಟಿಗೆ ಎರಡು ಹಕ್ಕಿ ಹೊಡೆದ ಹಾಗೆ' ಅಂತ ಅತ್ಯುತ್ಸಾಹದಿಂದ ಅಂದಿನಿಂದಲೇ ತೋಟಗಾರಿಕೆ ಪ್ರಾರಂಭಿಸಿದೆ.

ಅಕ್ಕಪಕ್ಕದವರನ್ನು ಕೇಳಿ ಕಟಿಂಗ್‌ಗಳು, ಸಸಿಗಳನ್ನು ತಂದಿದ್ದೇ ತಂದಿದ್ದು. ನೆಟ್ಟಿದ್ದೇ ನೆಟ್ಟಿದ್ದು. ಅದಕ್ಕೆ ನೀರು ಹೊತ್ತು ಹಾಕಿದ್ದು ಅಲ್ಲದೆ ಅಕ್ಕಿ ತೊಳೆದ ನೀರು, ತರಕಾರಿ ಸಿಪ್ಪೆ, ಮಿಕ್ಕಿದ ಸಾರು, ಚಟ್ನಿ, ಕಾಫಿಪುಡಿ ಟೀ ಸೊಪ್ಪಿನ ಚರಟ, ಯಾರೂ ಕುಡಿಯದಿದ್ದ ಹುಳಿಮಜ್ಜಿಗೆ, ಇತ್ಯಾದಿ, ಇತ್ಯಾದಿಗಳನ್ನೂ ಹಾಕಿದ್ದಾಯಿತು. ಈ ಗಿಡಗಳ ಉಪಾಹಾರ/ಉಪಚಾರಕ್ಕೆ ನೂರು ಸರ್ತಿ ಅಡಿಗೆ ಮನೆಯಿಂದ ಅಂಗಳಕ್ಕೆ ಓಡಾಡಿ, ಓಡಾಡಿ ಕಾಲು ಸೊಂಟ ನೋವು ಜಾಸ್ತಿ ಆಗಿ ಮೂರು ಬಾಟಲಿ ಅಮೃತಾಂಜನ ಖರ್ಚಾಗಿದ್ದು ಉಪ ಕತೆ.

ಇವುಗಳನ್ನೆಲ್ಲ ಹಾಕಿದ ಫಲವೋ, ನಮ್ಮ ಭೂಮಿಯ ಲಕ್ಷಣವೋ, ನನ್ನ ಕೈ ಗುಣವೋ, ಅಂತೂ ಗಿಡಗಳೆಲ್ಲಾ ಚೆನ್ನಾಗಿಯೇ ಚಿಗುರಿದವು. ಚಿಗುರಿ ಚಿಗುರಿ ಎಲೆಭರಿತವಾದವು. ಆದರೆ ಬೇರೇನೂ ಬಿಡಲಿಲ್ಲ ! ಅದಕ್ಕೇ ನನ್ನ ಮಗಳು ಕಾಲೇಜು ಕನ್ಯಾಮಣಿ 'ಮಮ್ಮಿ ಎಲೇರಿಯಂ' ಎಂದು ನಾಮಕರಣ ಮಾಡಿದಳು.

ಏನೋ ಹೋಗಲಿ ಮನೆ ಸುತ್ತ ಹಸಿರಾದರೂ ಇದೆ, ಕಣ್ಣಿಗೂ ತಂಪು. ಹೇಗಿದ್ದರೂ ಬಿಟ್ಟೊಡೆ ಹೂ ಬಿಡದೆ ? ನನ್ನ ಹಾಗೇ ನಾನು ಹಾಕಿದ ಗಿಡಗಳು ಸ್ವಲ್ಪ ನಿಧಾನ ಅಷ್ಟೆ, ಅಂತೆಲ್ಲ ನನಗೆ ನಾನೇ ಸಮಾಧಾನ ಮಾಡ್ಕೊಂಡು ನೀರು ಹುಯ್ದು ತೃಪ್ತಳಾಗಿ ಇದ್ದೆ.

ಆವತ್ತೊಂದು ದಿನ ನಮ್ಮ ಸೋದರತ್ತೆಯ ಮಗನ ಮದುವೆಗೆಂದು ಮನೆಯಲ್ಲಿ ಎಲ್ಲರೂ ಹೊರಟು ಹೋಗಿದ್ದೆವು. ಪುಷ್ಕಳವಾಗಿ ಉಂಡು, ತೇಗಿ ಮಧ್ಯಾಹ್ನದ ಕಾಫಿಯನ್ನೂ ಮುಗಿಸಿ ಮನೆಗೆ ಬರುವ ಹೊತ್ತಿಗೆ ಗಂಟೆ ಮೂರಾಗಿತ್ತು. ಇನ್ನೂ ಮನೆ ಅರ್ಧ ಮಾರು ಇರುವಾಗಲೇ 'ಅಯ್ಯೋ, ಮಮ್ಮಿ. ನಿನ್ನ ಎಲೇರಿಯಂ ಎಲ್ಲಾ ಖಾಲಿ' ಅಂದಳು ಮಗಳು. ಹತ್ತಿರ ಬಂದು ನೋಡಿದರೆ ಅಷ್ಟು ಶ್ರಮ ವಹಿಸಿ ತೆಗೆದ ಬೆಳೆ ಎಲ್ಲಾ ಬೋಳು. ಅದರ ಕಾರಣಕರ್ತೃ ಆ ಮೇಕೆ ಇನ್ನೂ ನಮ್ಮ ಮನೆಯಲ್ಲಿಯೇ, ಏನೂ ಆಗಿಲ್ಲವೆಂಬಂತೆ, ನಮ್ಮ ಬರವಿನ ಲಕ್ಷ್ಯವೂ ಇಲ್ಲದೆ, ಮೆಲುಕು ಹಾಕುತ್ತ ಒಂದು ಮೂಲೆಯಲ್ಲಿ ಆರಾಮವಾಗಿ ನಿಂತಿತ್ತು.

ನನಗಂತೂ ಮೈ ಎಲ್ಲಾ ಉರಿದು ಹೋಯಿತು. ತೆಗೆದು ನಾಲ್ಕು ಬಾರಿಸುವ ಎಂದು ಕೋಲು ತೆಗೆದುಕೊಂಡೆ. ಆದರೆ ಯಾಕೋ ಬೇರೆ ದಿಸೆಯಲ್ಲಿ ತಲೆ ಓಡಿತು. ಇದನ್ನ ಹೊಡೆದರೆ ಇನ್ನು ಎದುರಿಗಿರೋ ಆ S.P.C.A. activist ಶ್ಯಾಮ ರಾಯರು ಗಲಾಟೆ ಎಬ್ಬಿಸ್ತಾರೆ. ಅದನ್ನ ಆಸ್ಪತ್ರೆಗೆ ಕರೆದುಕೊಂಡು ಹೋಗಾ ವುದು ಎಲ್ಲಿಯ ಗ್ರಹಚಾರ ಅನ್ನಿಸಿತು. ಕಾರ್ಪೊರೇಷನ್ನು ಅಧಿಕಾರಿಗಳ ಹಾಗೆ ಕಟ್ಟಿಹಾಕಿದರೆ ಅನ್ನುವ ಯೋಚನೆ ಬಂತು. ಹಾ! ಅದೇ ಸರಿ. ಕಟ್ಟಿ ಹಾಕಿದಾಗ ಬಿಡಿಸಿಕೊಳ್ಳಲು ಅದರ ಮಾಲೀಕ ಬಂದೇ ಬರ್‍ತಾನೆ. ಅವನಿಂದ ನನಗಾದ ನಷ್ಟ ಎಲ್ಲ ವಸೂಲಿ ಮಾಡ್ತೀನಿ ಅಂತ ಅಂದಿದ್ದೇ.

ಒಳಗಿನಿಂದ ಹಗ್ಗ ತಂದು, ಕಷ್ಟಪಟ್ಟು. ಕೊಸರಾಡುತ್ತಿದ್ದ ಮೇಕೆಯನ್ನು ಕಟ್ಟಿಹಾಕಿದೆ. ಆ ಮೇಕೆ ಮಾಲೀಕನ ಹೇಗೆ ತರಾಟೆಗೆ ತೆಗೆದುಕೊಳ್ಳಲಿ ಅಂತ ಯೋಚಿಸ್ತಾನೇ ಅಲ್ಲೇ ವರಾಂಡದಲ್ಲಿ ಇದ್ದ ಕುರ್ಚಿ ಮೇಲೆ ಕೂತೆ. ಯಾವಾಗ ನಿದ್ರೆ ಹತ್ತಿತೋ ಗೊತ್ತಿಲ್ಲ.

'ಬ್ಯಾ ಬ್ಯಾ ಬ್ಯಾ' ಅನ್ನುವ ಅರಚಾಟದಿಂದ ಬೆಚ್ಚಿ ಎದ್ದು ಕೂತೆ. ಸುಮಾರು ಐದು ಗಂಟೆಯಾಗಿತ್ತು. ಒಂದೆರಡು ಗಂಟೆ ಕಾಲ ಒಂದೇ ಸಮನೆ ನಿಂತು ಆ ಮೇಕೆಗೂ ಬೇಜಾರಾಗಿತ್ತೇನೋ. ಬೊಬ್ಬಿಡಲು ಶುರು ಮಾಡಿತು. ಅಷ್ಟರಲ್ಲಿ ಪಕ್ಕದ ಮನೆ ಕಿಟಕಿ ಕಾಮಾಕ್ಷಮ್ಮ 'ಅಯ್ಯೋ ಇಷ್ಟು ದಿವಸಾನೂ ನೀವು ವೆಜಿಟೇರಿಯನ್ಸ್ ಅಂತ ತಿಳ್ಕೊಂಡಿದ್ದೆನಲ್ರೀ' ಅಂದಿದ್ದು ಕೇಳಿಸದವಳ ಹಾಗೆ ಇದ್ದೆ. ಅಷ್ಟು ಹೊತ್ತಿಗೆ ಮುಂದಿನ ಬೀದಿ ಸ್ಕೂಲೂ ಬಿಡ್ತು. ವಾಪಸ್ಸು ಹೋಗೋ ಹುಡುಗರೆಲ್ಲ ನಮ್ಮನೆ ಮುಂದೆ ಬಂದು ಆ ಮೇಕೇನ ನೋಡಿದ್ದೂ ನೋಡಿದ್ದೇ.

'ಆಂಟಿ, ಇದು ನಿಮ್ಮ ಅಪ್ಪುಗೆ birthday gift pet ಆಗಿ ತಂದಿದೀರಾ?'
'ಇದಕ್ಕೆ ಏನು food ಕೊಡ್ತೀರಾ, ಯಾರು ಸ್ನಾನ ಮಾಡಿಸ್ತಾರೆ ?'

'ಆಂಟಿ, ಇದರ **name** ಏನು ?'

ಇತ್ಯಾದಿ, ಇತ್ಯಾದಿ ಪ್ರಶ್ನೆಗಳಿಗೆ ಉತ್ತರಿಸುವುದೇ ದುಸ್ತರವಾಯ್ತು.

ಗಂಟೆ ಆರಾಯಿತು. ಕತ್ತಲಾಗುತ್ತ ಬಂತು. ಯಾವ ಮಾಲೀಕನೂ ಈ ಕಳೆದು ಹೋದ ಮೇಕೆಯ ಬಗ್ಗೆ ತಲೆಕೆಡಿಸಿಕೊಳ್ಳಲಿಲ್ಲ. ಅದರ ಅರಚಾಟ, ಕೂಗಾಟದಿಂದ ಎಲ್ಲರಿಗೂ ಬೇಜಾರಾಗಲು ಶುರುವಾಯ್ತು.

"ಹೋಗ್ಲಿ ಬಿಡೆ ಅದನ್ನ. ಏನು ಹೂವೇ, ಹಣ್ಣೇ ಅದು ತಿಂದಿದ್ದು ? ಒಂದಿಷ್ಟು ಎಲೆ ತಾನೇ ? ನೋಡು, ನಿನ್ನ ತೋಟಗಾರಿಕೆಯೂ ಸಾಕು. ಈ ಮೇಕಾಯಣವೂ ಸಾಕು. ನಿನ್ನ ಗಿಡಗಳಲ್ಲಿ ಹೂವೂ ಬಿಡಲ್ಲ, ನಿನ್ನ ನಮ್ಮವೂ ಕರಗಲಿಲ್ಲ. ಬರೀ ವಾಟರ್ ಬಿಲ್ ಜಾಸ್ತಿಯಾಗಿ ನನ್ನ ಜೇಬು ಕರಗಿತು ಅಷ್ಟೆ" ಅಂತ ತಾವೇ ಹೋಗಿ ಅದರ ಹಗ್ಗವನ್ನು ಬಿಚ್ಚಿ ಓಡಿಸಿದರು.

ನಿಜವಾಗಿ ಹಸಿರು........ಕ್ರಾಂತಿ



(44ನೇ ಪುಟದಿಂದ)
ನೋಡಿದನು. ತನ್ನ ಉತ್ತರದ ಪುಸ್ತಕದಲ್ಲಿ ಒಂದೇ ಹಾಳೆ ಬರೆದಿದ್ದುದು. ಮತ್ತೊಂದರಲ್ಲಿ ಎಲ್ಲಾ ಪ್ರಶ್ನೆಗಳ ಉತ್ತರವೂ ಇಟ್ಟಿತು. ಕಲ್ಲಪ್ಪನು ಸ್ವಲ್ಪವಾದರೂ ಹಿಂತೆಗೆಯದೆ "ಇದೇ ನನ್ನ ಉತ್ತರದ ಪುಸ್ತಕ" ಎಂದು ಎರಡನೆಯ ಪುಸ್ತಕದ ಮೇಲೆ ತನ್ನ ಅಂಕಿಯನ್ನು ಜೋಪಾನವಾಗಿ ಮುತ್ತಿನಂಥಾ ಬರವಣಿಗೆಯಲ್ಲಿ ಬರೆದನು. ಮೊಟ್ರಿಕ್‌ನಲ್ಲಿ ತೂರಿಕೊಂಡನು !

ಇಂಟರ್ ಪರೀಕ್ಷೆಯದೇನೂ ಹೇಳಬೇಕಾದ ಅಂತಹ ಹೆಚ್ಚಿನ ವಿಷಯವಲ್ಲ. ಉಸ್ತುವಾರಿಯಲ್ಲಿದ್ದವರ ಬೆನ್ನು ಕಲ್ಲಪ್ಪನ ಕಡೆ ತಿರುಗಿದಾಗಲೆಲ್ಲ ಸ್ವಲ್ಪ ಸ್ವಲ್ಪ ಗಾಳಿ ಬೀಸಿದ ಹಾಗೆ ಆಗುತ್ತಿತ್ತು. ಮನೆಯಿಂದ ಬರೆದುಕೊಂಡು ಹೋಗಿದ್ದ ಒಂದು ಕಾಗದವನ್ನು ಮೆಲ್ಲಮೆಲ್ಲಗೆ ನೋಡಿ ಉತ್ತರಗಳನ್ನು ತೂರಿ ತೇರ್ಗಡೆ ಹೊಂದಿದನು.

ಬಿ.ಎ. ಪರೀಕ್ಷೆಗೆ ಕೂತಾಗ ಬೀಸಿದ ಗಾಳಿಯೇ ಬೇರೆ ರೀತಿಯದು. ಪರೀಕ್ಷೆಗೆ ಎಂಟು ದಿನಗಳಿಗೆ ಮುಂಚಿತವಾಗಿ ಯಾವುದೋ ಪುಸ್ತಕ ಬೇಕೆಂದು ತನ್ನ ಪ್ರೊಫೆಸರವರ ಕೊಠಡಿಗೆ ಹೋದನು. ಅವರು ಬರುವುದು ಎರಡು ನಿಮಿಷ ಸಾವಕಾಶವಾದ್ದರಿಂದ ಅಲ್ಲಿಯೇ ಕೂತು ಮೇಜಿನಮೇಲಿದ್ದ ಕಾಗದಗಳನ್ನೆಲ್ಲಾ ತಿರುವಿ ಹಾಕತೊಡಗಿದನು. ಒತ್ತುವ ಕಾಗದದ ರಟ್ಟಿನ ಕೆಳಗೆ ಯಾವುದೋ ಒಂದು ಕಾಗದವು ಕಂಡು ಬಂದಿತು. ನೋಡಿದನು, ಕೆಲವು ಪ್ರಶ್ನೆಗಳು ಬರೆಯಲ್ಪಟ್ಟಿದ್ದುವು. ಒಡನೆಯೇ ಜ್ಞಾಪಕಕ್ಕೆ ಬಂದಿತು. ಈ ಪ್ರೊಫೆಸರವರೂ ತನ್ನ ಒಬ್ಬ ಪರೀಕ್ಷಕರೆಂದು ತಕ್ಷಣ ಬೇರೆಯೊಂದು ಕಾಗದದಲ್ಲಿ ಅವೆಲ್ಲವನ್ನೂ ಗುರುತಿಸಿಕೊಂಡನು. ಪ್ರೊಫೆಸರು ಬರುವ ವೇಳೆಗೆ ಎಲ್ಲಾ ಯಥಾಸ್ಥಿತಿ. ತನಗೆ ಬೇಕಾದ ಪುಸ್ತಕವನ್ನು ಕೇಳಿ ತೆಗೆದುಕೊಂಡು ಏನೂ ತಿಳಿಯದೆ ಹಸುಕೂಸಿನಂತೆ ಹೊರಗೆಬಂದನು. ಆ ಸಲ ಬಿ.ಎ. ಪರೀಕ್ಷೆಯಲ್ಲಿ ಕಲ್ಲಪ್ಪನಿಗೆ ಎಂದು ಭಾಗದಲ್ಲಿ ಫಸ್ಟ್‌ಕ್ಲಾಸ್! ಮತ್ತೊಂದು ಭಾಗದಲ್ಲಿ—ಎಂದು ಹಾಳೆ ಅಲುಗಾಡುವಷ್ಟು ಗಾಳಿಯೂ ಕೂಡ ಬೀಸಿರಲಿಲ್ಲ !

ನಾಲ್ಕು ಸಲ ಪ್ರಯತ್ನಪಟ್ಟು ಕಡೆಗೆ ಎರಡನೆಯ ಭಾಗವನ್ನು ಮುಗಿಸಿದನು. ಮುಂದಕ್ಕೇನು ಮಾಡಬೇಕೆಂಬ ದೊಡ್ಡ ಸಮಸ್ಯೆ. ಕಡೆಗೆ ಇವನ ಬುದ್ಧಿ ವಿಚಕ್ಷಣೆ ಸಿಕ್ಕ ಸುಸಮಯಗಳನ್ನು ಸಮಂಜಸವಾಗಿ ಉಪಯೋಗಿಸುವ ಚಾತುರ್ಯ ಇವನ್ನೆಲ್ಲಾ ಪರ್ಯಾಲೋಚಿಸಿ ಎಲ್ಲರೂ ಇವನು ಲಾಯರಾಗಬೇಕೆಂದು ನಿರ್ಧರಿಸಿದರು.

ಅದೇ ಪ್ರಕಾರ ಲಾಯರು ಪರೀಕ್ಷೆಗಳಿಗೆ ಕೂತನು. ಮೊದಮೊದಲು ಸನ್ನಿವೇಶಗಳು ಸಮರ್ಪಕವಾಗಿ ಸಿಕ್ಕಲಿಲ್ಲವಾಗಿ ಹಲವಾರು ಸಲ ಮತ್ತೆ ಮತ್ತೆ ಓದಬೇಕಾಯಿತ್ತು. ಆದರೇನು? ಕಲ್ಲಪ್ಪನು ಎದೆಗುಂದುವ ಹೇಡಿಯಾಗಿರಲಿಲ್ಲ. ಬಹಳ ಸಾಹಸಪಟ್ಟು ಪ್ರಶ್ನೆಪತ್ರಿಕೆಗಳು ಅಚ್ಚಾಗುವ ಮುದ್ರಣಾಲಯದಲ್ಲಿ ಕೆಲಸಮಾಡುವವರೊಬ್ಬರ ಗುರುತುಮಾಡಿಕೊಂಡು ಲಾಯರು ಪರೀಕ್ಷೆಯನ್ನು ಮುಗಿಸಿಯೇಬಿಟ್ಟನು.

ಇದರಿಂದ ಅವನಿಗೆ ಗಾಳಿ ಬಂದಾಗ ತೂರಿಕೊಳ್ಳುವ ಬುದ್ಧಿವಂತಿಕೆಯೊಂದೇ ಅಲ್ಲದೆ, ತನಗೆ ಬೇಕಾದ ಹಾಗೆ ಗಾಳಿಯನ್ನುಂಟುಮಾಡಿಕೊಳ್ಳುವ ಸಾಮರ್ಥ್ಯವೂ ಇದ್ದಿತೆಂದು ವ್ಯಕ್ತವಾಗುವುದು.

ಲಾಯರ್ ಕೆಲಸ ಪ್ರಾರಂಭಮಾಡಿದ ಮೂರು ತಿಂಗಳಲ್ಲಿಯೇ ಭಾರಿ ಮೊಕದ್ದಮೆಯೊಂದನ್ನು ಹಿಡಿದನು. ಕೆಳಗಿನ ಕೋರ್ಟಿನಲ್ಲಿ ಇವನ ಪರವೇ ಆಯಿತು. ಮೇಲಿನ ಕೋರ್ಟಿನಲ್ಲಿ ವಿರುದ್ಧವಾಯಿತು. ಅಪೀಲಿಗೆ ಹೋಯಿತು. ಸೂಚನೆಗಳು ಕಲ್ಲಪ್ಪನಿಗೆ ಹಿತಕರವಾಗಿ ಕಾಣಲಿಲ. ಮೊಕದ್ದಮೆ ಇತ್ಯರ್ಥಕ್ಕೆ ಬರುವ ವೇಳೆಗೆ ಪ್ರತಿಕಕ್ಷಿಯ ಪರಲಾಯರು ಖಾಯಿಲೆ ಬಿದ್ದರು. ಸಮಯವು ಚೆನ್ನಾಗಿ ಒದಗಿತು. ತನಗೆ ಸಲ್ಲಬೇಕಾದ ಫೀಸು ಸರಿಯಾಗಿ ಬರಲಿಲ್ಲವೆಂದು ತನ್ನ ಕಕ್ಷಿಗಾರರೊಂದಿಗೆ ಜಗಳ ಹೂಡಿ ಅವರನ್ನು ಕೈಬಿಟ್ಟನು. ಪ್ರತಿಕಕ್ಷಿಗಳನ್ನು ಗುಟ್ಟಾಗಿ ಕರೆಸಿ ಎಲ್ಲವನ್ನು ನಿಮ್ಮ ಕಡೆಗೆ ಮಾಡಿಕೊಡುವೆನೆಂದು ಅವರ ಕಡೆ ಲಾಯರಾಗಿ ನಿಂತನು. ಅಪೀಲಿನ ಇತ್ಯರ್ಥವು ತನ್ನಷ್ಟಕ್ಕೆ ತಾನೇ ಇರುವ ಕಡೆಯಾಯಿತು. ಕಲ್ಲಪ್ಪನಿಗೆ ಗಿಟ್ಟಿತು-ಎರಡು ಸಾವಿರ ರೂಪಾಯಿಗಳು; ಎಲ್ಲರೂ ಅವನ ಚಾಕಚಕ್ಯತೆಯನ್ನು ಕಂಡು ಬೆರಗಾದರು.

ಕಲ್ಲಪ್ಪನು ಹೀಗೆಯೇ ಪ್ರವರ್ಧಮಾನಕ್ಕೆ ಬಂದನು. ಕಾಲಕ್ರಮೇಣ ಅನೇಕ ಸಂಸ್ಥೆಗಳನ್ನು ನಡೆಸಬೇಕಾದ ಜವಾಬ್ದಾರಿಯೂ ಇವನಿಗೆ ವಹಿಸಲ್ಪಟ್ಟಿತು. ಸರಿ, ಕೇಳಬೇಕೆ? ಒಂದು ಬರೆಯುವ ಕಡೆ ಮೂರು ಬರೆದು, ನಾಲ್ಕು ಕೊಡುವ ಕಡೆ ಎರಡೇ ಕೊಟ್ಟು, ತಾನು ಬಿಡುವ ಉಸಿರಿನ ಗಾಳಿಯಲ್ಲಿಯೂ ಸಹ ತನಗೆ ಅನುಕೂಲವಾಗುವಂತೆ ತೂರಿಕೊಳ್ಳುವುದರಲ್ಲಿ ನಿಸ್ಸೀಮನಾದನು. ಅವನ ದಕ್ಷತೆಯನ್ನು ಕೇಳಿ ಭಾರಿ ಜಮೀನ್‌ದಾರನೊಬ್ಬನು ಅವನನ್ನು ತನ್ನ ಸಲಹೆಗಾರನನ್ನಾಗಿ ನೇಮಿಸಿಕೊಂಡನು. ಕಲ್ಲಪ್ಪನಾದರೋ ಅಚ್ಚುಮೆಚ್ಚಾದ ನಡವಳಿಕೆಗಳಿಂದ ಜಮೀನ್‌ದಾರನ ಸಂಪೂರ್ಣ ಆದರಕ್ಕೆ ಪಾತ್ರನಾದನು.

ಹೀಗಿರುವಲ್ಲಿ ಜಮೀನ್‌ದಾರನಿಗೆ ಒಂದು ಗಂಡು ಮಗು ಹುಟ್ಟಿತು. ಅನೇಕ ವರ್ಷಗಳ ಮೇಲೆ ಪುತ್ರೋತ್ಸವವಾದ ಸಂತೋಷಾರ್ಥವಾಗಿ ಜಮೀನ್‌ದಾರನು ತನ್ನ ಜಹಗೀರಿಯಲ್ಲಿದ್ದ ಬಡಬೇಸಾಯಗಾರರಿಗೆಲ್ಲಾ ಸ್ವಲ್ಪ ಸ್ವಲ್ಪ ಜಮೀನನ್ನು ದಾನವಾಗಿ ಕೊಡಬೇಕೆಂದು ನಿಶ್ಚಯಿಸಿ ಈ ಕೆಲಸವನ್ನು ಕಲ್ಲಪ್ಪನಿಗೇ ಒಪ್ಪಿಸಿದನು ಕಲ್ಲಪ್ಪನಿಗೆ ಒಳ್ಳೆಯ ಮಲಯಮಾರುತವೆ ಬೀಸಿದಂತಾಯಿತು, ಅರ್ಧ ಜಹಗೀರಿಯನ್ನೆಲ್ಲಾ ದಾನವಾಗಿ ಹಂಚಿ ಖ್ಯಾತಿ ಪಡೆದನು................

ಭೀಮಣ್ಣನು ಕಥೆಯನ್ನು ಇಲ್ಲಿಗೆ ನಿಲ್ಲಿಸಿ ಅನ್ಯಮನಸ್ಕನಾಗಿ ಏನನ್ನೋ ಯೋಚಿಸುತ್ತ ಕುಳಿತನು ಕುಳ್ಳಪ್ಪನು 'ಹಾಗಾದರೆ, ಜೋಯಿಸರು ಇವನ ಜಾತಕದ ವಿಷಯವಾಗಿ ತಮ್ಮ ಮನೆಯಲ್ಲಿ ಹೇಳಿದ ಮಾತು ಸುಳ್ಳಾಯಿತು?' ಎಂದನು.

ಭೀಮಣ್ಣನು ಒಂದು ನಿಮಿಷ ಸುಮ್ಮನಿದ್ದು 'ಇಲ್ಲ' ಎಂದನು ಎಲ್ಲರೂ 'ಏಕೆ? ಏನಾಯಿತು?' ಎಂದು ಕುತೂಹಲದಿಂದ ಕೇಳಿದವು. ಭೀಮಣ್ಣನು ಹೀಗೆಂದು ಹೇಳಿದನು. 'ಅರ್ಧ ಜಹಗೀರಿಯನ್ನೇನೋ ಹಂಚಿಬಿಟ್ಟನು. ಆದರೆ, ಎಂತಹ ಸತ್ಯವಂತರಿಗೂ ಈ ಪ್ರಪಂಚದಲ್ಲಿ ಹಗೆಗಳಿರುವರಷ್ಟೆ: ಕಲ್ಲಪ್ಪನಿಗೂ ಆಗದ ಕೆಲವರಿದ್ದರು. ಅವರು ಜಮೀನ್ದಾರನ ಬಳಿ ಹೋಗಿ ಕಲ್ಲಪ್ಪನು ದಾನ ಕೊಡುವ ನೆಪದಲ್ಲಿ ಅಷ್ಟು ಜಮೀನನ್ನೂ ತಾನೇ ಹೊಡೆದುಬಿಟ್ಟಿರುವನೆಂದು ಚಾಡಿ ಹೇಳಿ, ಹೀಗೆಯೇ ಬಿಟ್ಟರೆ ಪೂರ್ತಿ ಜಮೀನ್ದಾರಿಯನ್ನೇ ನುಂಗಿಬಿಡುವನೆಂದು ಹೆದರಿಸಿದನು, ಜಮೀನ್ದಾರನು ಇದನ್ನು ನಂಬುವುದಕ್ಕೆ ಕಷ್ಟಪಡದಿದ್ದರೂ ನೋಡೋಣವೆಂದು ರಹಸ್ಯವಾಗಿ ವಿಚಾರಿಸತೊಡಗಿದನು. ಜಮೀನೆಲ್ಲವೂ ಕಲ್ಲಪ್ಪನ ಅಪ್ಪ, ಅಣ್ಣ, ತಮ್ಮ, ಸೋದರಳಿಯ, ಭಾವಮೈದ ಇವರುಗಳ ಹೆಸರಿಗೇ ಬರೆಯಿಸಲ್ಪಟ್ಟಿದ್ದವು! ಜಮೀನ್ದಾರನಿಗೆ ಸಂಶಯವುಂಟಾಗಿ ಇವನ ಆಡಳಿತಕ್ಕೆ ಕೊಡಲ್ಪಟ್ಟಿದ್ದ ಲೆಕ್ಕ ಪತ್ರಗಳನ್ನೆಲ್ಲಾ ಶೋಧಿಸಿದನು. ಈಗ ನಂಬಿಕೆ ದ್ರೋಹದ ಅಪಾದನೆ ಮೇಲೆ ನ್ಯಾಯಾಸ್ಥಾನದಲ್ಲಿ ಮೊಕದ್ದಮೆ ದಾಖಲಾಗಿದೆ. ತಪ್ಪಿಸಿಕೊಂಡು ಹೋಗಲು ಯತ್ನಿಸಿದ್ದರಿಂದ ಅವನನ್ನು ಹಿಡಿದು ಬಂಧನದಲ್ಲಿಟ್ಟಿದ್ದಾರೆ...............

ಅಂತೂ ಬಹು ಬುದ್ಧಿಶಾಲಿ ನಮ್ಮ ಕಲ್ಲಪ್ಪ, ಆದರೆ, ಕಡೆಯ ಸಲ ಗಾಳಿ ಯಾವ ದಿಕ್ಕಿಗೆ ಬೀಸುತ್ತಿದೆಯೆಂಬುದನ್ನು ಲೆಕ್ಕಿಸದೆ ಕೆಲಸಮಾಡಿದನು, ಅಷ್ಟೆ....

ಭೀಮಣ್ಣನು ಮುಗಿಸಿದ ಮೇಲೆ ಸ್ವಲ್ಪ ಹೊತ್ತು ಯಾರೂ ಮಾತಾಡಲಿಲ್ಲ. ಕಡೆಗೆ ಕಪ್ಪಣ್ಣನು "ಬೆಣ್ಣೆಗೂ ಇದಕ್ಕೂ ಏನು ಸಂಬಂಧ?" ಎಂದನು.

ಭೀಮಣ್ಣನು "ಏನೂ ಇಲ್ಲ, ಬೆಣ್ಣೆ ಸಿಕ್ಕಿದಾಗ ತಿಂದುಕೊ ಎಂದು ಯಾರೋ ನೀತಿ ಹೇಳಿವರಷ್ಟೆ. ಅಗತ್ಯವಾಗಿ ತಿಂದುಕೊ. ಆದರೆ, ಅಜೀರ್ಣವಾಗದಂತೆ ನೋಡಿಕೋ, ಅಷ್ಟೆ!"

ಎಲ್ಲರೂ ತಿನ್ನುತ್ತಿದ್ದುದನ್ನು ಅಲ್ಲಲ್ಲಿಗೇ ಬಿಟ್ಟು ಎದ್ದವು.



